

# ಸಿದ್ಧಗಂಗಾ



ಜುಲೈ ೨೦೦೨



ಜೂನ್ ೧೭ರಂದು ಬೆಂಗಳೂರಿನಲ್ಲಿರುವ ಶ್ರೀ ಗುರುವಣ್ಣ ದೇವರ ಮಠದಲ್ಲಿ ನಡೆದ ನಿರಂಜನ ನಿರಾಭಾರಿ ಚರಪಟ್ಟಾಧಿಕಾರ ಮಹೋತ್ಸವದ ಅಂಗವಾಗಿ ನಡೆದ ಧಾರ್ಮಿಕ ಸಭೆಯನ್ನು ಹರಗುರು ಚರಮೂರ್ತಿಗಳ ದಿವ್ಯ ಸಮ್ಮುಖದಲ್ಲಿ ಶ್ರೀ ಶ್ರೀ ಕಾಲಾಗ್ನಿರುದ್ರಮುನಿ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸುತ್ತಿರುವುದು.



ಸಂಪುಟದರ್ಜೆ ಸಚಿವರಾಗಿ ಬಡ್ತಿ ಪಡೆದ ಉನ್ನತ ಶಿಕ್ಷಣ ಸಚಿವ ಡಾ. ಜಿ. ಪರಮೇಶ್ವರ್ ಅವರನ್ನು ಪೂಜ್ಯ ಶ್ರೀ ಶ್ರೀಗಳವರು ಶಾಲುಹೊದಿಸಿ ಫಲತಾಂಬೂಲ ನೀಡಿ ಆಶೀರ್ವದಿಸುತ್ತಿರುವುದು. ಈ ಸಂದರ್ಭದಲ್ಲಿ ಶ್ರೀಮಠದ ಆಡಳಿತಾಧಿಕಾರಿ ಶ್ರೀ ಪಿ.ಎಸ್. ಪುಟ್ಟಶಂಕರಯ್ಯ ಅವರು ಉಪಸ್ಥಿತರಿದ್ದರು.



ಶ್ರೀಮಠದಲ್ಲಿ ಸ್ವಾಮಿ ವಿವೇಕಾನಂದರ ಪುಣ್ಯ ಸ್ಮರಣೆ



ಮುಖಪುಟ

ಶ್ರೀ ಗುರುವಣ್ಣದೇವರ ಮಠದಲ್ಲಿ ನಿರಂಜನ ನಿರಾಭಾರಿ ಚರಪಟ್ಟಾಧಿಕಾರ ಮಹೋತ್ಸವ.
ಉನ್ನತ ಶಿಕ್ಷಣ ಸಚಿವರಾದ ಡಾ. ಜಿ. ಪರಮೇಶ್ವರ್ ಅವರಿಗೆ ಶ್ರೀ ಶ್ರೀಗಳವರಿಂದ ಆಶೀರ್ವಾದ.
ಸ್ವಾಮಿ ವಿವೇಕಾನಂದರು.

ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೪
ದೂರವಾಣಿ : ೩೬೦೪೦೮೭

ಲೇಖಕರ ಅಭಿಪ್ರಾಯಗಳು ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೮ ಜುಲೈ ೨೦೦೨ ಸಂಚಿಕೆ : ೭

## ಒಳಪುಟಗಳಲ್ಲಿ.........




| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/– |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೫೦೦/– |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೦.೦೦ |






## ಸ್ವಾಮಿ ವಿವೇಕಾನಂದರ ಸ್ಮರಣೆ .......

೨೦೦೨ರ ಜುಲೈ ೫ರಂದು ಶ್ರೀಮಠದಲ್ಲಿ ವಿಶೇಷ. ವಿದ್ಯಾರ್ಥಿಗಳಿಗೆ, ಕ್ಷೇತ್ರಾರ್ಥಿಗಳಿಗೆ ಸಿಹಿಯಾದ ಊಟ. ಆತ್ಮೀಯರೋರ್ವರ ಸೇವೆ. ಆತ್ಮೀಯರು ಶ್ರೀಮಠದ ಅನನ್ಯ ಭಕ್ತರು. ನಿವೃತ್ತ ಪ್ರಾಧ್ಯಾಪಕರು. ಶ್ರೀ ಸಿದ್ಧಗಂಗಾ ಕಾಲೇಜಿನಲ್ಲಿ ರಾಜ್ಯಶಾಸ್ತ್ರ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದವರು. ಸಾಹಿತ್ಯ ಪರಿಚರ್ಯೆಯಲ್ಲಿ ತೊಡಗಿದವರು. ಶ್ರೀ ಬಿ. ವೀರಭದ್ರಯ್ಯನವರು. ಸ್ವಾಮಿ ವಿವೇಕಾನಂದರ ಪುಣ್ಯಸ್ಮರಣೆಯನ್ನು ಪರಮಪೂಜ್ಯ ಶ್ರೀ ಶ್ರೀಗಳವರ ದಾಸೋಹ ಮಣೆಹದಲ್ಲಿ ಆಚರಿಸಿದ ವಿನಮ್ರರು.

೨೦೦೨ರ ಜುಲೈ ೪ಕ್ಕೆ ಸ್ವಾಮಿ ವಿವೇಕಾನಂದರು ಇಹಲೋಕವನ್ನು ಅಗಲಿ ಒಂದು ನೂರು ವರ್ಷಗಳಾಯಿತು. ಅವರು ಜನಿಸಿದ್ದು ೧೮೬೩ರ ಜನವರಿ ೧೨ರಂದು. ತಂದೆ ವಿಶ್ವನಾಥ ದತ್ತ, ತಾಯಿ ಭುವನೇಶ್ವರಿ ದೇವಿ. ಹುಟ್ಟಿದ್ದು ಕಲ್ಕತ್ತದಲ್ಲಿ. ಪೂರ್ವಾಶ್ರಮದ ಹೆಸರು ನರೇಂದ್ರನಾಥ ದತ್ತನೆಂದು. ಗುರು ರಾಮಕೃಷ್ಣ ಪರಮಹಂಸರ ಪ್ರಭಾವಕ್ಕೆ ಹಣೆಮಣೆದು ಶಿಷ್ಯರಾದನಂತರ ವಿವೇಕಾನಂದರಾದರು. ಭರತಖಂಡವನ್ನು ಸುತ್ತಿ ಬಂದರು. ಅದೂ ಕಾಲ್ನಡಿಗೆಯಲ್ಲಿ. ಅನುಭವ ವೈವಿಧ್ಯಗಳನ್ನು ತಮ್ಮದಾಗಿಸಿಕೊಂಡರು. ಸ್ತುತಿ ನಿಂದೆಗಳಿಗೆ ಮನದಲ್ಲಿ ಕೋಪ ತಾಳದಾದರು. ಕಿತ್ತು ತಿನ್ನುವ ಬಡತನ, ಅಜ್ಞಾನ, ರೋಗಗಳನ್ನು ಕಂಡು ಮರುಗಿದರು. ಭಾರತದ ಪ್ರಾಚೀನ ವೈಭವವನ್ನು ತಿಳಿದು ಎದೆಯುಬ್ಬಿಸಿದರು. ಕನ್ಯಾಕುಮಾರಿಯಲ್ಲಿ ಕಡಲನ್ನು ಈಜಿದರು. ಬಂಡೆ ಮೇಲೆ ಕುಳಿತು ಧ್ಯಾನಲೀನರಾದರು. ಜನ ಕಲ್ಯಾಣಕ್ಕೆ ಅರ್ಪಿಸಿಕೊಳ್ಳುವ ಸಂಕಲ್ಪ ದೀಕ್ಷಿತರಾದರು. ೧೮೯೩ರಲ್ಲಿ ಸೆಪ್ಟೆಂಬರ್ ತಿಂಗಳಿನಲ್ಲಿ ಅಮೆರಿಕಾದ ಚಿಕಾಗೋದಲ್ಲಿ ನಡೆದ ವಿಶ್ವ ಧರ್ಮಸಮ್ಮೇಳನದಲ್ಲಿ ಹೃದಯಸ್ಪರ್ಶಿ ಉಪನ್ಯಾಸ ನೀಡಿ ಜಗದ್ವಿಖ್ಯಾತರಾದರು. ಅಮೆರಿಕ, ಯೂರೋಪ್‌ಗಳಲ್ಲಿ ಉಪನ್ಯಾಸ ನೀಡಿ ವೇದಾಂತ ಪ್ರಚಾರ ಮಾಡಿದರು. ಅವರಿಂದಾಗಿ ಭಾರತೀಯ ದರ್ಶನಗಳೂ ಸಂಸ್ಕೃತಿಯೂ ವಿಶ್ವಮಾನ್ಯವಾದವು. ಭಾರತದತ್ತ ಜಗತ್ತು ನೋಡುವಂತಾಯಿತು. ತಮ್ಮ ಜ್ಞಾನ ಪರಾಕ್ರಮದಿಂದ ಸ್ವಾಮಿ ವಿವೇಕಾನಂದರು ಜಡನಿದ್ರೆಯಲ್ಲಿದ್ದ ದೇಶವನ್ನು ಬಡಿದೆಬ್ಬಿಸಿದರು. ಅವರ ಗಮನವಿದ್ದುದೆಲ್ಲ ಜನಸಾಮಾನ್ಯರ ಉದ್ಧಾರದಲ್ಲಿ; 'ದರಿದ್ರ ದೇವೋಭವ', 'ದೀನ ದೇವೋಭವ' ಎಂಬುದರಲ್ಲಿ ''ಇವನಾರವ ಇವನಾರವ ಇವನಾರವ ನೆನ್ನಲಿಲ್ಲ; ಇವ ನಮ್ಮವ ಇವ ನಮ್ಮವ ಇವ ನಮ್ಮವ''ನೆಂಬ ಬಸವಣ್ಣನವರ ವಾಣಿಯ ಬೆಳಕಿನಲ್ಲಿ ಅರಳಿದರು.

ಅವರು ಸಾಧಿಸಿದ ಕಾರ್ಯಗಳೆಂದರೆ ಭಾರತೀಯರಲ್ಲಿ ರಾಷ್ಟ್ರಪ್ರಜ್ಞೆಯನ್ನು ಉದ್ದೀಪಿಸಿದ್ದು, ಜನ ಕಲ್ಯಾಣಕ್ಕಾಗಿ ಸೇವಾ ಕಾರ್ಯಗಳನ್ನು ಹುಟ್ಟುಹಾಕಿದ್ದು, ವೇದಾಂತ ತತ್ವಗಳನ್ನು ಆಧುನಿಕ ಮನಸ್ಸುಗಳು ಒಪ್ಪುವಂತೆ ಹೊಸ ರೂಪವನ್ನು ನೀಡಿದ್ದು, ಭಾರತವು ಜಗತ್ತಿನಲ್ಲಿ ತಲೆಯೆತ್ತಿ ನಿಲ್ಲುವಂತೆ ಮಾಡಿದ್ದು, ಧರ್ಮವನ್ನು ವಿಶಾಲಾರ್ಥದಲ್ಲಿ ನಿರೂಪಿಸಿದ್ದು, ವಿಶ್ವದ ಚಿಂತನಧಾರೆಯ ಮೇಲೆ ಪ್ರಭಾವವನ್ನು ಬೀರಿದ್ದು.

''ಶ್ರದ್ಧೆ! ಶ್ರದ್ಧೆ! ಆತ್ಮ ಶ್ರದ್ಧೆ! ಶ್ರದ್ಧೆ! ಶ್ರದ್ಧೆ! ಈಶ್ವರನಲ್ಲಿ ಶ್ರದ್ಧೆ! ಇದೇ ಮಹಾತ್ಮೆಯ ಮೂಲ. ನೀವು ನಿಮ್ಮ ಮೂವತ್ತಮೂರು ಕೋಟಿ ದೇವತೆಗಳನ್ನು ನಂಬಿ, ಜೊತೆಗೆ ಪಾಶ್ಚಾತ್ಯರಿಂದ ಆಮದು ಮಾಡಿಕೊಂಡಿರುವ ದೇವತೆಗಳನ್ನು ನಂಬಿದರೂ ನಿಮ್ಮಲ್ಲಿ ಆತ್ಮ ಶ್ರದ್ಧೆ ಇಲ್ಲದೇ ಇದ್ದರೆ ನಿಮಗೆ ಉದ್ಧಾರವಿಲ್ಲ. ಮೊದಲು ಆತ್ಮ ಶ್ರದ್ಧೆ ಇರಲಿ.''

''ವಿದ್ಯಾಭ್ಯಾಸವೆಂದರೇನು? ಪುಸ್ತಕ ಪಾಂಡಿತ್ಯವೇ? ಅಲ್ಲ. ಹಲವು ವಿಧದ ಜ್ಞಾನಾರ್ಜನೆಯೇ? ಅದೂ ಅಲ್ಲ; ಯಾವ ತರಬೇತಿಯ ಮೂಲಕ ಇಚ್ಛಾಶಕ್ತಿಯ ಪ್ರವಾಹ ಮತ್ತು ಅಭಿವ್ಯಕ್ತಿಗಳು ನಿಯಂತ್ರಣಕ್ಕೆ ಒಳಗಾಗಿ ಫಲಕಾರಿಯಾಗುವುವೋ ಅದೇ ಶಿಕ್ಷಣ''.

''ಧರ್ಮದ ರಹಸ್ಯವಿರುವುದು ಸಿದ್ಧಾಂತಗಳಲ್ಲಲ್ಲ; ಆಚರಣೆಯಲ್ಲಿ. ಒಳ್ಳೆಯವನಾಗಿರುವುದು ಮತ್ತು ಒಳ್ಳೆಯದನ್ನು ಮಾಡುವುದು – ಇದೇ ಧರ್ಮದ ಸರ್ವಸ್ವ. ಕೇವಲ 'ದೇವರೇ', 'ದೇವರೇ' ಎಂದು ಕೂಗುವವನಲ್ಲ, ಆ ತಂದೆಯ ಇಚ್ಛೆಯನ್ನು ಕಾರ್ಯಗತಗೊಳಿಸುವವನು ಅವನಿಗೆ ಪ್ರಿಯನು.'' ಇವು ಸ್ವಾಮಿ ವಿವೇಕಾನಂದರ ಕೆಲವು ನುಡಿಗಳು.

– ಸಂಪಾದಕ







## ಹಣದ ಆಕರ್ಷಣೆ

ಇದು ಕೇಳಿದ ಪ್ರಸಂಗ – ಮೊನ್ನೆ ಶ್ರೀಮಠಕ್ಕೆ ಬಂದಿದ್ದವರು ಹೇಳಿದ್ದು. ಒಂದು ಮಗುವಿಗೆ ಸಂಬಂಧಪಟ್ಟದ್ದು. ಮಗುವಿನ ವಯಸ್ಸು ಒಂದೂವರೆ ವರ್ಷ. ಇನ್ನೂ ನಡೆದಾಡುವುದಕ್ಕೆ ಪ್ರಾರಂಭವಾಗಿತ್ತು. ದಗ್ಗಾಡುತ್ತಲೇ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗಿ ಬರುತ್ತಿತ್ತು. ಒಮ್ಮೆ ಮಗುವನ್ನು ಮನೆಯ ಮುಂಭಾಗದಲ್ಲಿ ಅಂದರೆ ಅಂಗಳದಲ್ಲಿ ಆಟವಾಡಲು ಬಿಟ್ಟು ಮಗುವಿನ ತಾಯಿ ಮನೆ ಕೆಲಸದಲ್ಲಿ ನಿರತಳಾದಳು. ಮಗು ಆಟವಾಡುತ್ತ ದಗ್ಗಾಡುತ್ತಲೇ ಅಂಗಳದ ಮುಂಭಾಗದಲ್ಲಿದ್ದ ಚರಂಡಿಯೊಳಗೆ ನುಸುಳಿ ಒಳಗೆ ಹೋಯಿತು. ಚರಂಡಿ ತುಂಬಾ ಕಿರಿದಾಗಿತ್ತು. ಏಕಮುಖ ಸಂಚಾರದ ದಾರಿಯಷ್ಟು ಇಕ್ಕಟ್ಟಾಗಿತ್ತು. ತಿರುಗಿಕೊಳ್ಳಲು ಆಗದಷ್ಟು ಕಿರಿದಾದ ಚರಂಡಿ. ಮಗು ಚರಂಡಿಯ ಒಳಗೆ ಕೈಗೆ ಸಿಗಲಾರದಷ್ಟು ದೂರ ಹೋಗಿಬಿಟ್ಟಿತ್ತು. ದೊಡ್ಡವರು ತೂರಲಾರದಷ್ಟು ಸಣ್ಣದಾದ ಆ ಚರಂಡಿಯ ಮೇಲೆ ದಪ್ಪ ದಪ್ಪದ ಚಪ್ಪಡಿಗಳನ್ನು ಹಾಕಿದ್ದರು. ತಾಯಿ ಮನೆಕೆಲಸದ ಮಧ್ಯೆ ಮಗುವನ್ನು ಜ್ಞಾಪಿಸಿಕೊಂಡು ಹೊರಗೆ ಬಂದು ನೋಡಿದರೆ ಮಗು ಅಳುವುದು ಕೇಳಿಸಿತು. ಆದರೆ ಕಾಣಲಿಲ್ಲ. ತಾಯಿಗೆ ಗಾಬರಿ. ಎಲ್ಲಿ ಹೋಯಿತು? ಅಳುವುದು ಕೇಳಿಸುತ್ತಿದೆಯಲ್ಲಾ. ಎಲ್ಲಿರಬಹುದು ಎಂದು ಕಳವಳಕ್ಕೀಡಾದಳು. ಎಲ್ಲ ಕಡೆ ಕಣ್ಣಾಡಿಸಿದಳು, ಕಾಣಲಿಲ್ಲ. ಕೊನೆಗೆ ಏನೋ ಹೊಳೆದಂತಾಯಿತು. ಚರಂಡಿಯ ಒಳಗೆ ಬಗ್ಗಿ ನೋಡಿದಳು. ಮಗು ಕಾಣಿಸಿತು. ಆದರೇನು ಮಗುವನ್ನು ಈಚೇಗೆ ಕರೆದುಕೊಳ್ಳಲಾಗುತ್ತಿಲ್ಲ. ಅಳುವುದಕ್ಕೆ ಷುರು ಮಾಡಿದಳು. ಅಕ್ಕಪಕ್ಕದವರು ಬಂದರು. ಏನು? ಯಾಕೆ? ಕೇಳಿದರು. ತಾಯಿ ಚರಂಡಿ ತೋರಿಸಿದಳು. ಕೆಲವರು ಬಗ್ಗಿ ನೋಡಿದರು. ಮಗು ಕಾಣಿಸಿತು. ಆದರೆ ಮಗುವನ್ನು ಈಚೆಗೆ ಕರೆಯುವುದು ಹೇಗೆ? ಹೊರತರುವ ಬಗೆ ಎಂತು? ಕೆಲವರು ಹೇಳಿದರು ಮೇಲಿರುವ ಕಲ್ಲು ಚಪ್ಪಡಿಗಳನ್ನು ತೆಗೆದುಬಿಡೋಣ. ಆದರೆ ಅದು ಸರಿಯಲ್ಲ. ಏನಾದರೂ ಆದರೆ ಅಪಾಯ ತಪ್ಪಿದ್ದಲ್ಲವೆಂದರು. ಮತ್ತೆ ಕೆಲವರು ಆಹಾರ ತೋರಿಸೋಣ ಬರಬಹುದು ಎಂದರು. ಆದರೆ ಆಹಾರನೋಡುವುದಕ್ಕೆ ಆಗದಂತೆ ಮಗು ಮುಮ್ಮುಖವಾಗಿದೆಯಲ್ಲಾ ಎಂದರು. ಹಾಡು ಹೇಳೋಣ ಎಂದವರು ಕೆಲವರು. ಉದ್ದನೆಯ ಕೋಲಿನಿಂದ ಎಳೆದುಕೊಳ್ಳೋಣ ಎಂದು ಯೋಚಿಸಿದರು. ಆದರೆ ದೂರದಲ್ಲಿತ್ತು ಮಗು. ಏನು ಮಾಡಬೇಕೆಂಬುದೇ ತೋಚದಂತಾಗಿ ಎಲ್ಲರೂ ಗರಬಡಿದವರಂತೆ ನಿಂತಿಬಿಟ್ಟರು. ಮಗುವಿನ ತಾಯಿ ಪ್ರಜ್ಞಾಹೀನಳಾಗಿಬಿಟ್ಟಳು. ಮೊನ್ನೆ ಕೊಳವೆಭಾವಿಯೊಳಗೆ ಬಿದ್ದ ಮಗುವಿನ ನೆನಪಿನ ಮಾತುಗಳು ಷುರುವಾದವು. ಹೇಗೆ ಮಗುವನ್ನು ಹೊರತರುವುದೆಂದು ತಲೆ ತುರಿಸಿಕೊಳ್ಳುವ ಪರಿಸ್ಥಿತಿ. ಒಬ್ಬ ಲೋಕಾನುಭವಿಗೆ ಏನೋ ಹೊಳೆದಂತಾಯಿತು. ಮಗುವಿನ ತಂದೆಯನ್ನು ಹತ್ತಿರ ಕರೆದು ಕಿವಿಯಲ್ಲಿ ಪಿಸುಗುಟ್ಟಿದ ತಂದೆ ಓಡಿ ಹೋದ. ಐದು ನಿಮಿಷದಲ್ಲಿ ಹಿಂದಿರುಗಿದ. ಕೈಯಲ್ಲಿ ಭಾರವಾದ ಹಣದ ಚೀಲವಿತ್ತು. ಅದರ ತುಂಬಾ ನಾಣ್ಯಗಳಿದ್ದವು. ಅವುಗಳನ್ನು ಆ ಲೋಕಾನುಭವಿ ಚರಂಡಿಯ ಬಾಯಿ ಬಳಿ ಎತ್ತರದಿಂದ ಝಣ ಝಣ ಶಬ್ದ ಬರುವಂತೆ ಕೆಳಗೆ ಸುರಿದ. ಹಣದ ಶಬ್ದ ಕೇಳಿಸಿಕೊಂಡ ಚರಂಡಿಯಲ್ಲಿದ್ದ ಮಗು ಹಾಗೇ ಹಿಮ್ಮುಖವಾಗಿ ದಗ್ಗುತ್ತ ದಗ್ಗುತ್ತ ಹೊರಬರಲು ಪ್ರಾರಂಭಿಸಿತು. ಮತ್ತೆ ಮತ್ತೆ ಕೆಳಗೆ ಬಿದ್ದಿದ್ದ ನಾಣ್ಯಗಳನ್ನು ಎತ್ತಿಕೊಂಡು ಶಬ್ದ ಬರುವ ಹಾಗೆ ಕೆಳಗೆ ಸುರಿಯುತ್ತ ಬರಲಾಯಿತು. ಮಗು ಹಿಮ್ಮುಖವಾಗಿ ಬಂದಿತು ಕೈಯಳತೆಗೆ ಮಗು ಬಂದಿದ್ದೇ ತಡ ಮಗುವನ್ನು ಹಗುರವಾಗಿ ಹಿಂದಕ್ಕೆಳೆದುಕೊಂಡರು. ಮಗು ಬದುಕಿತು. ಹಣದ ಆಕರ್ಷಣೆ ಮಗುವನ್ನೂ ಬಿಟ್ಟಿದ್ದಲ್ಲ. ಅದಕ್ಕೇ ನಯಸೇನನೆಂಬ ಜೈನಧರ್ಮದ ಒಬ್ಬ ಗುರು ತನ್ನ ಧರ್ಮಾಮೃತ ಗ್ರಂಥದಲ್ಲಿ ಒಂದು ಮಾತು ಹೇಳಿದ್ದಾನೆ. ಬಂಗಾರದ ಬಳಿ ಒಂದು ನಾಯಿಯನ್ನು ಬಿಟ್ಟರೆ ಅದೂ ಕೂಡಾ ಒಮ್ಮೆ ಬಂಗಾರವನ್ನು ನೆಕ್ಕಿ ನೋಡದಿರದು ಎನ್ನುತ್ತಾನೆ. ಇನ್ನು ಸಾಮಾನ್ಯರ ಮಾತೇನು ಬಂತು. ಕಾವಿ ಕಾಷಾಯಾಂಬರಧಾರಿಗಳೂ ಹಣದ ಸೆಳೆತದಿಂದ ದೂರಾಗಲಿಲ್ಲ. ಕಾಂಚನ, ಕಾಮಿನಿಯರಿಂದ ದೂರವಿರುವುದೆಂದರೆ ಆತ್ಮ ಸಂಯಮಗಳಿಂದ ಮಾತ್ರ ಸಾಧ್ಯ. ಮಂಡೆ ಬೋಳಿಸಿಕೊಂಡಿರಬಹುದು. ಮನಬೋಳಿಸಿಕೊಂಡವರು ವಿರಳ.

ಹಣದ ಆಕರ್ಷಣೆಯಿಂದ ರಾಷ್ಟ್ರವೇ ಇಂದು ರೋಗಗ್ರಸ್ಥವಾಗಿರುವುದನ್ನು ಕಾಣುತ್ತಿದ್ದೇವೆ. ಶೀಲ ಸಮೃದ್ಧಿಗೆ ಹೆಸರಾದ ರಾಷ್ಟ್ರಕ್ಕೆ ದಿಕ್ಕು ತೋರಿಸುವ ಕರುಣಾಳು ಮತ್ತೊಮ್ಮೆ ಅವಸರಿಸಬೇಕಾಗಿದೆ.

❄

ॐ



# ಶ್ರೀ ಸಿದ್ಧಲಿಂಗೇಶ್ವರ ವಚನ

*ರಕ್ಕಸಿಯ ಹೊಳಲಲ್ಲಿ ಒಂದು ಪಕ್ಷಿಹುಟ್ಟಿ*
*ರಕ್ಕಸಿಯ ಕೊಂದುದು ಕಂಡೆನಯ್ಯಾ*
*ಹಿಕ್ಕೆಯ ಬಿಟ್ಟು ಹಕ್ಕೆಯ ಮೇದು*
*ಅಖಂಡಿತವಾದುದು ಸೋಜಿಗ ಕಾಣಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ದೇಹವೆಂಬ ನಗರ, ಅದರ ಮಧ್ಯದಲ್ಲಿ ಸಮ್ಯಗ್ ಜ್ಞಾನವೆಂಬ ಪಕ್ಷಿ. ದೇಹವನ್ನು ಅವಿದ್ಯೆಯೆಂಬ ಶಕ್ತಿ ಮುತ್ತಿದೆ. ಸೂರ್ಯನುದಯದಿಂದ ಮಂಜು ಕರಗುವಂತೆ ಅಜ್ಞಾನವೆಂಬ ಅವಿದ್ಯಾ ಕತ್ತಲೆ ಜ್ಞಾನವೆಂಬ ಪಕ್ಷಿಯ ಉದಯದಿಂದ ಕರಗುತ್ತದೆ. ಜ್ಞಾನದ ಉದಯವೆಂದರೆ ಶರಣನುದಯವೆಂದೇ ಅರ್ಥ. ಶುದ್ಧ ವಿದ್ಯಾಸ್ವರೂಪನಾದ ಶರಣ ಮಲಮಾಯಾ ಕರ್ಮಗಳ ಕಳೆದು ಲಿಂಗಭೋಗೋಪಭೋಗಿಯಾಗಿ ಸಕಲಕ್ಕೆ ಆಶ್ರಯವಾದ ಚಿದ್ಘನಲಿಂಗದಲ್ಲಿ ಏಕಾರ್ಥವಾದ ಪರಿಯು ಅತಿ ವಿಚಿತ್ರವಾಗಿರುವುದು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

**ಶ್ರೀವಾಣಿ**

*ಮಹಾತ್ಮಾಜೀಯವರ ಸಂದೇಶದಂತೆ ಸ್ವಾತಂತ್ರ್ಯ ಅರ್ಥವತ್ತಾಗಬೇಕಾದರೆ ಪ್ರತಿಯೊಂದು ವ್ಯಕ್ತಿಗೂ ಕೂಡ ಎರಡು ವೇಳೆ ಸಮೃದ್ಧಿಯಾದ ಊಟ ದೊರೆಯ ಬೇಕು.*

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ನಿಮ್ಮೊಲವೆ ಶಿವಚೆಲುವು ನಿಮ್ಮ ನೋಟವೆ ಬೆಳಕು
ನಿಮ್ಮ ಸವಿನುಡಿಯೆನಗೆ ಸಂಜೀವಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯಜೀವದ ಹೊಲಿಗೆ ಗುಟ್ಟನರಿದಿರುವಂಥ
ದೇವಸಾಲಿಗ ಯೋಗಿ ನೀನಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯಕದವಗುಣ ಕಳೆದು ಜೀವರತ್ನವ ಬೆಳಗಿ
ಜ್ಞಾನರತ್ನದ ರಸದ ಸುಧೆಯುಣಿಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರವೆಂಬುದು ಅಂತರಂಗದ ರತುನ
ಅನುಭಾವ ಲಿಂಗದ ಸೋಪಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರದರಸನೆ ನೀತಿಯ ನಿಜಗುಣನೆ
ಅನುಭಾವದರಿವಿನ ಶುಭ ಸೂರ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ಒಲುಮೆಯ ಘನವನೇನೆಂದು ಪಮಿಸಲಯ್ಯ
ನಿನ್ನ ಪ್ರೀತಿಯ ಮಾತಿಗೇನನಲಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೂಡುಣ್ಣುವುದು ಸಲ್ಲ ನೀತಿ ಮಾರ್ಗಕೆ ಹೊಲ್ಲ
ಪರರಿಗೆ ಹೊರೆಯಾಗುವುದಲ್ಲ । ವೆನ್ನುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

''ಹೂವಮುಡಿಯಬಹುದು ಗಂಧವ ಮುಡಿಯಬಹುದೆ''
ಹರನೆಂದು ನಮಿಸಿ ನರನೆನಬಹುದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕ್ರೀ ಶುದ್ಧವಾದರೆ ಭಾವ ಶುದ್ಧವಹುದು
ನಡೆ ಶುದ್ಧವಾದರೆ ನುಡಿ ಶುದ್ಧ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ಒಳಗನು ಬಲ್ಲ ಜಾಣರ ನಾ ಕಾಣೆ
ನೀನೊಂದು ಈ ಧರೆಯ ಸೋಜಿಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







# ಅನುಭಾವದ ಅಂಗಡಿ

– ಗೊ.ರು. ಚನ್ನಬಸಪ್ಪ
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು–೮೨

*ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ*
*ಹರದ ಕುಳ್ಳಿರ್ದ ನಮ್ಮ ಮಹದೇವಶೆಟ್ಟಿ*
*ಒಮ್ಮನವೆಂದಡೆ ಒಡನೆ ನುಡಿವನು*
*ಇಮ್ಮನವಾದಡೆ ನುಡಿಯನು*
*ಕಾಣಿಯ ಸೋಲ, ಅರ್ಧಕಾಣಿಯ ಗೆಲ್ಲ*
*ಜಾಣ ನೋಡವ್ವ ನಮ್ಮ ಕೂಡಲಸಂಗಮದೇವಾ !*

ಇದು ಬಸವಣ್ಣನ ವಚನಗಳಲ್ಲಿ ಬರುವ ಭಕ್ತನ ಜ್ಞಾನಿಸ್ಥಲದ ಒಂದು ವಚನ. ಇದೇನೂ ಅಂತಹ ಕ್ಲಿಷ್ಟವಾದ ಬೆಡಗಿನ ವಚನವಲ್ಲ. ನಿಘಂಟಿನಲ್ಲಿ ಅರ್ಥ ಹುಡುಕಬೇಕಾದ ಯಾವ ಕಠಿಣ ಶಬ್ದವೂ ಇದರಲ್ಲಿಲ್ಲ. ಇದೊಂದು ಲೋಕ ವ್ಯವಹಾರದ ಒಂದು ಸುಂದರ ಪ್ರತಿಮೆ. ಬಸವಣ್ಣನ ಪ್ರತಿಭೆ ಇರುವುದೇ ಇಂತಹ ಪ್ರತಿಮಾ ವಿಧಾನದಲ್ಲಿ. ನಮ್ಮ ಸುತ್ತಮುತ್ತಲಿನ ನಿತ್ಯ ಬದುಕಿನ ಅನುಭವವನ್ನೇ ನಮ್ಮೆದುರಿಗಿಟ್ಟು ಅದನ್ನು ಅನುಭಾವದ ಎತ್ತರಕ್ಕೆ ಒಯ್ದು ತೋರಿಸುವ ಅನ್ವಯಪ್ರತಿಪಾದನೆ ಬಸವಣ್ಣನದು.

ಈ ವಚನ ಮೊದಲ ಸಾಲು ಧರಣಿಯ ಮೇಲೊಂದು ಹಿರಿದಪ್ಪ 'ಅಂಗಡಿಯನಿಕ್ಕಿ' ಎನ್ನುವುದು. ಈ ಮೊದಲ ಸಾಲಿನ ಮೊದಲ ಶಬ್ದ 'ಧರಣಿ'. ಬಸವಣ್ಣನ ಆದ್ಯತೆ ಇರುವುದೇ ಈ ಧರಣಿಯ ಮೇಲಿನ ಮಾನವ ಬದುಕಿಗೆ. ಅವನ ಕಳಕಳಿಯೆಲ್ಲ ಈ ನೆಲದ ಮೇಲಿನ ಸಕಲ ಜೀವರಾಶಿಯ ಬಗೆಗೆ. ಶಾಸ್ತ್ರಗ್ರಂಥಗಳು ಹೇಳುವ, ಪುರಾಣಗಳು ವರ್ಣಿಸುವ ಬೇರಾವ ಲೋಕಗಳ ಬಗೆಗೂ ಅವನಿಗೆ ನಂಬಿಕೆಯಿಲ್ಲ. ಅವನ ಗಮನದಲ್ಲಿರುವುದು ನಾವಿರುವ ಈ ಲೋಕವೊಂದೇ.

ನಾನು *ಬಸವಣ್ಣನ ವಚನಗಳನ್ನೆಲ್ಲ ಕಣ್ಣಾಡಿಸಿ ನೋಡಿದ್ದೇನೆ. ನೂರಾರು ಕಡೆ ಈ 'ಧರಣಿ'ಯನ್ನು ಬೇರೆ ಬೇರೆ ಶಬ್ದಗಳಲ್ಲಿ ಬಳಸಿರುವುದು ಕಂಡುಬರುತ್ತದೆ. ಉದಾ : ಭಕ್ತಿಯೆಂಬ ಪೃಥ್ವಿಯ ಮೇಲೆ, ಜಗದ ನೆಂಟ ನೀನೆ ಅಯ್ಯ, ಧರೆ ಹತ್ತಿ ಉರಿದಡೆ, ಬೆಳೆಯ ಭೂಮಿಯಲೊಂದು, ನಂಬಲರಿಯರೀ ಲೋಕದ ಮನುಜರು, ದೇವಲೋಕ ಮರ್ತ್ಯಲೋಕವೆಂಬವು, ನರವಿಂಧ್ಯದೊಳಗೆನ್ನ, ನೆಲದ ಮರೆಯ ನಿಧಾನದಂತೆ ಇತ್ಯಾದಿ.*

ಇಲ್ಲಿ ಬರುವ ಪೃಥ್ವಿ, ಜಗ, ಧರೆ, ಭೂಮಿ, ಲೋಕ, ಮರ್ತ್ಯ ನರವಿಂಧ್ಯ, ನೆಲ – ಈ ಎಲ್ಲ ಶಬ್ದಗಳೂ ಧರಣಿಯ ಅರ್ಥಗಳೇ ಆಗಿವೆ. ಬಸವಣ್ಣನ ಒಟ್ಟು ದೃಷ್ಟಿ ಇಡೀ ವಿಶ್ವವೇ ಆಗಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಜೀವರಾಶಿಗಳೆಲ್ಲ ಹುಟ್ಟುವುದು ಈ ಭೂಮಿಯಲ್ಲಿ; ಬದುಕುವುದು ಈ ಭೂಮಿಯಲ್ಲಿ; ಕೊನೆಗೆ ಲೀನವಾಗುವುದೂ ಈ ಭೂಮಿಯಲ್ಲೇ. ಹಾಗೆಂದೇ, ಬಸವಣ್ಣನ ಮಾತುಗಳೆಲ್ಲ ಭೂಸಂಬಂಧಿಯಾಗಿವೆ; ವಿಶ್ವಸಂಬಂಧಿಯಾಗಿವೆ; ವಿಶ್ವಕ್ಷೇಮವನ್ನೇ ಹಾರೈಸುತ್ತವೆ. *'ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ'* ಎನ್ನುವ ಮಾತೊಂದೇ ಸಾಕು – ಬಸವಣ್ಣನಿಗೆ ವಿಶ್ವಮಾನವ ಪಟ್ಟ ಕಟ್ಟಲಿಕ್ಕೆ.

'ಧರಣಿಯ ಮೇಲೊಂದು ...' ವಚನದ ಒಟ್ಟು ಸಾರವಿಷ್ಟು; ಈ ಭೂಮಿಯ ಮೇಲೆ ಒಂದು ದೊಡ್ಡ ಅಂಗಡಿಯನ್ನಿಟ್ಟು ಮಹಾದೇವಶೆಟ್ಟಿ ಎಂಬ ವರ್ತಕ ಕುಳಿತಿದ್ದಾನೆ. ಆತ ತುಂಬ ಕಟ್ಟುನಿಟ್ಟಿನವ. ಹೆಚ್ಚು ಮಾತಿಲ್ಲ. ಬಂದ ಗಿರಾಕಿಯ ಮನ ನೋಡಿ ಮಾತನಾಡುತ್ತಾನೆ. ವ್ಯಾಪಾರದಲ್ಲೂ ಅಷ್ಟೆ, ಕರಾರುವಾಕ್ಕು ಬೆಲೆ. ಹಾಗಾಗಿ ಅವನು ಜಾಣ. ಇದು ವಚನದ ನೇರ ಸಾರ.

ಈ ಭೂಮಿಯ ಮೇಲಿರುವ ಈ ಹಿರಿಯಂಗಡಿಯಲ್ಲಿ ಲೋಕದ ಬದುಕಿಗೆ ಬೇಕಾದ ಸಾಮಗ್ರಿಗಳೆಲ್ಲ ದೊರೆಯುತ್ತವೆ. ಅದಕ್ಕೇ ಇದು ಹಿರಿಯಂಗಡಿ. ನೋಡಿಕೊಳ್ಳಲು ಅಂಗಡಿಯ ಮಾಲಿಕನೇ ಕುಳಿತಿದ್ದಾನೆ. ಮಾಲಿಕನ ಹೆಸರು ಮಹಾದೇವಶೆಟ್ಟಿ, ಮಹಾಭಕ್ತ ಸಿರಿಯಾಳನನ್ನೇ ಶೆಟ್ಟಿ ಎಂದು ಕರೆಯದ ಬಸವಣ್ಣ ಈ ವರ್ತಕ ಮಹಾದೇವನಿಗೆ 'ಶೆಟ್ಟಿ'ಯ ಬಿರುದು ಕೊಟ್ಟಿದ್ದಾನೆ. ಈ ಹರದ ಎಂದರೆ ವರ್ತಕ ಎಲ್ಲ ವ್ಯಾಪಾರಿಗಳಂತಲ್ಲ, ಗಿರಾಕಿಗಳಿಗಾಗಿ ಕಾಯುವ, ಬಂದ ಗಿರಾಕಿಗಳಿಗೆ ಗಿಲೀಟು ಮಾಡುವ, ಗಿರಾಕಿಯ ಕಣ್ಣು ತಪ್ಪಿಸಿ ಕಡಿಮೆ ತೂಗುವ ಅಥವಾ ಅಳೆಯುವ, ಎಡೆಬಿಡದೆ ಮಾತಾಡುವ, ಬೇಡವೆಂದರೂ ಒತ್ತಾಯಮಾಡಿ ವಸ್ತುಗಳನ್ನು ಹೇರುವ, ಯಾರೂ ಕೇಳದೆ ಉಳಿದ ಸಾಮಗ್ರಿಗಳ ಬಗ್ಗೆ ನೂರು ಬಣ್ಣ ಹಚ್ಚಿ ಮಾರುವ, ಮಾರುಕಟ್ಟೆಯ ಬೇರೆಡೆ ಕೊರತೆಯಿರುವ ವಸ್ತುಗಳನ್ನು ಧಾರಾಳವಾಗಿ ಹೊರತೆಗೆಯದ, ಸಂದರ್ಭ ನೋಡಿಕೊಂಡು ಬೆಲೆ ನಿಗದಿಗೊಳಿಸುವ, ನಮ್ಮ ಕಾಲದ ವರ್ತಕನಂತಲ್ಲ.

ಈ ಮಹಾದೇವ ಶೆಟ್ಟಿಯ ಅಂಗಡಿ ಸಾಮಾನ್ಯವಾದುದಲ್ಲ. ಧರಣಿಯ ಮೇಲೆ ಹಿರಿದಪ್ಪ ಅಂಗಡಿ. ಅದು ಕಿರಾಣಿಯಲ್ಲ, ಬಿಡಿ ವಸ್ತುಗಳ ಅಂಗಡಿಯಲ್ಲ. ಅದು ಸರ್ವಸಾಮಗ್ರಿಗಳ ಬೃಹತ್

ಭಂಡಾರ.. ಗಿರಾಕಿಗೆ ಬೇರೆಲ್ಲೂ ದೊರೆಯದ ವಸ್ತುಗಳು ಇಲ್ಲಿ ಸಿಗುತ್ತವೆ. ಈ ವರ್ತಕನೂ ಸಾಮಾನ್ಯನಲ್ಲ, ಬಹಳ ಬುದ್ಧಿವಂತ. ಗಿರಾಕಿಯ ಮನಸ್ಸನ್ನು ಸೂಕ್ಷ್ಮವಾಗಿ ಪರೀಕ್ಷಿಸುತ್ತಾನೆ. ಆತ ಒಳ್ಳೆಯ ಮನಃಶಾಸ್ತ್ರಜ್ಞನೂ ಹೌದು. ಬಂದ ಗಿರಾಕಿಗೆ ಕೊಳ್ಳುವ ಆಸಕ್ತಿ, ಆರ್ಥಿಕ ಶಕ್ತಿ ಇದೆಯೇ ಇಲ್ಲವೋ ಎಂಬುದನ್ನು ಅವನ ಮುಖಭಾವ ದಿಂದಲೇ ಕಂಡುಕೊಳ್ಳುತ್ತಾನೆ. ಅವನ ಒಲವು ನಿಲುವುಗಳನ್ನು ಅಭಿರುಚಿ ಅಗತ್ಯಗಳನ್ನು ಅರ್ಥಮಾಡಿಕೊಳ್ಳುತ್ತಾನೆ.

ಈ ಶೆಟ್ಟಿ ಬಹು ಕಟ್ಟುನಿಟ್ಟಿನ ವ್ಯಕ್ತಿ. ವ್ಯಾಪಾರವಾದರೆ ಹಿಗ್ಗಿಲ್ಲ, ಆಗದಿದ್ದರೆ ಕುಗ್ಗಿಲ್ಲ. ವಿಶಿಷ್ಟವೆಂದರೆ, ಗಿರಾಕಿ ಬಂದೇ ಬರುತ್ತಾರೆಂಬ ಪೂರ್ಣವಿಶ್ವಾಸ ಅವನಿಗಿರುವುದು. ಏಕೆಂದರೆ, ಬೇರಾವ ಅಂಗಡಿ ಯಲ್ಲೂ ದೊರೆಯದ ವಸ್ತುಗಳು ಅವನ ಅಂಗಡಿಯಲ್ಲಿವೆ. ಗಿರಾಕಿ ಎಲ್ಲೆಲ್ಲೋ ತಿರುಗಿ, ಎಲ್ಲೂ ದೊರೆಯದೆ ಕೊನೆಗೆ ಇಲ್ಲಿಗೇ ಬರಬೇಕು. ಈ ಗುಟ್ಟು ಶೆಟ್ಟಿಗೆ ಚೆನ್ನಾಗಿ ತಿಳಿದಿದೆ.

ಮಹಾದೇವ ಶೆಟ್ಟಿಯ ಅಂಗಡಿಯಲ್ಲಿರುವ ವಸ್ತುಗಳು ಕಳಪೆಯಲ್ಲ, ನಕಲಿಯಲ್ಲ, ಪೂರ್ಣ ಅಸಲಿ. ಅಂಗಡಿಯಲ್ಲಿ ಎಲ್ಲ ವಸ್ತುಗಳನ್ನೂ ಅಚ್ಚುಕಟ್ಟಾಗಿ ಜೋಡಿಸಿಡಲಾಗಿದೆ. ಪ್ರತಿಯೊಂದು ವಸ್ತುವಿನ ಪೊಟ್ಟಣದ ಮೇಲೂ ಅದರ ತೂಕ, ಪ್ರಮಾಣ ಮತ್ತು ನಿಖರವಾದ ಬೆಲೆಗಳನ್ನು ನಮೂದಿಸಿರುತ್ತದೆ; ಸರಕು ಮುದ್ರೆ ಇರುತ್ತದೆ. ಗುಣಮಟ್ಟದ ದೃಢಚೀಟಿ ಇರುತ್ತದೆ. ಉತ್ಕೃಷ್ಟವಲ್ಲದ ಉಪಯುಕ್ತವಲ್ಲದ ಯಾವ ವಸ್ತುವೂ ಈ ಅಂಗಡಿಯಲ್ಲಿ ಇಲ್ಲ. ಇಲ್ಲಿ ಚೌಕಾಶಿಗೆ ಅವಕಾಶವಂತೂ ಇಲ್ಲವೇ ಇಲ್ಲ.

ಕೊಳ್ಳುವವನು ಈ ಅಂಗಡಿಯಲ್ಲಿ ಯಾವ ವಸ್ತು ಕೊಂಡರೂ ಅವನಿಗೆ ನಷ್ಟವಿಲ್ಲ. ಈ ಶೆಟ್ಟಿ ಉಳಿದವರಂತೆ ಹೆಚ್ಚು ಮಾತನಾಡು ವುದಿಲ್ಲ. ಗಲ್ಲಾ ಪೆಟ್ಟಿಗೆಯ ಬಳಿ ಕುಳಿತ ಗಂಭೀರ ಪದ್ಮಾಸನ ಅವನದು. ತನ್ನಲ್ಲಿರುವ ಸಾಮಗ್ರಿಯ ಬಗ್ಗೆ ಅವನೆಂದೂ ಜಾಹಿರಾತು ನೀಡುವುದಿಲ್ಲ. 'ಹಬ್ಬದ ಪ್ರಯುಕ್ತ ರಿಯಾಯತಿ ಮಾರಾಟ' ಇಲ್ಲಿಲ್ಲ. ಮನೆಯ ಬಾಗಿಲಿಗೇ ಮಾರಾಟದ ಹುಡುಗರನ್ನು ಕಳುಹಿಸಿ ಸಾಮಗ್ರಿ ಸರಬರಾಜು ಮಾಡುವ ಪದ್ಧತಿಯ ಅಂಗಡಿಯೂ ಇದಲ್ಲ. ಅಗತ್ಯವಿರುವವರು, ಕೊಳ್ಳಲು ಅರ್ಹತೆ ಇರುವವರು ತಾವೇ ಮಹಾದೇವ ಶೆಟ್ಟಿಯ ಅಂಗಡಿಗೆ ಹೋಗಬೇಕು.

ಅಂಗಡಿಗೆ ಬಂದ ಗಿರಾಕಿಯನ್ನೂ ಅಷ್ಟೆ, ಪರೀಕ್ಷಿಸದೆ ಒಳಗೆ ಬಿಡುವುದಿಲ್ಲ ಶೆಟ್ಟಿ. ಒಳಗೆ ಬಂದವನನ್ನು ಸುಮ್ಮನೆ ಗಮನಿಸುತ್ತಾನೆ. ಅವನಿಗೆ ಕೊಳ್ಳುವ ಮನಸ್ಸಿದೆಯೆ? ಅರ್ಹತೆ ಇದೆಯೆ? ಅಗತ್ಯ ವಿದೆಯೆ? ಎಂಬುದನ್ನೆಲ್ಲ ತನ್ನ ಸೂಕ್ಷ್ಮ ನೋಟದಿಂದಲೇ ಅರಿತು ನೋಡಿ ನಂತರ ಮಾತನಾಡಿಸುತ್ತಾನೆ. ಗಿರಾಕಿ ಹೊಯ್ದಾಡಿದರೆ, ಅಥವಾ ಸುಮ್ಮನೆ ಎಲ್ಲ ವಸ್ತುಗಳ ಬೆಲೆ ಕೇಳುತ್ತಿದ್ದರೆ, 'ಇವನು ಕೊಳ್ಳಲು ಬಂದಿಲ್ಲ' ಎಂದು ನಿರ್ಧರಿಸುವ ಶೆಟ್ಟಿ ಆತನೊಡನೆ ಮಾತೇ ಆಡುವುದಿಲ್ಲ.

ಗಿರಾಕಿಗೆ 'ಒಮ್ಮನ'ವಿದ್ದರೆ ಶೆಟ್ಟಿ ಒಡನೆ ಮಾತನಾಡುತ್ತಾನೆ. ಇನ್ನು ಮಾರುವುದರಲ್ಲೂ ಅಷ್ಟೇ ಕಟ್ಟುನಿಟ್ಟು, ಕಾಣಿಯ ಸೋಲದ, ಅರ್ಧಕಾಣಿಯ ಗೆಲ್ಲದ ಬಿಗಿ ವ್ಯಾಪಾರ. ಗಿರಾಕಿ ಪರಿಚಿತನಿದ್ದರೂ ವ್ಯಾಪಾರವೆಂದರೆ ವ್ಯಾಪಾರ. ಯಾರು ಬಂದರು ಅಷ್ಟೇ ನಿಗದಿತ ಬೆಲೆಯಲ್ಲಿ ಕೊಸರಾಟಕ್ಕೆ ಅವಕಾಶವಿಲ್ಲ. ಇಟ್ಟ ಬೆಲೆಯನ್ನು ಕೊಟ್ಟು ಪಡೆಯಬೇಕು.

ಹಣ ಸ್ವಲ್ಪ ಕಡಿಮೆ ಇದೆ ಎಂದರೆ ಶೆಟ್ಟಿ ಕೇಳುವುದಿಲ್ಲ. ಸಾಲದ ಮಾತಂತೂ ಸುಳಿಯುವಂತಿಲ್ಲ. ಎಲ್ಲ ನಗದಿನ ನಡವಳಿಕೆ. ಸಾಲಕೊಟ್ಟರೆ ಹಿಂದಕ್ಕೆ ಪಡೆಯುವುದು ಕಷ್ಟವೆಂಬುದು ಶೆಟ್ಟಿಗೆ ಗೊತ್ತು. ಒಮ್ಮೆ ಸಾಲ ಪಡೆದ ಗಿರಾಕಿ ಮತ್ತೆ ಅವನ ಅಂಗಡಿಗೆ ಬಾರದೆ ತಪ್ಪಿಸಿಕೊಂಡು ಓಡಾಡಬಹುದು. ಸಾಲದ ಮೇಲಿನ ಬಡ್ಡಿ ಲೆಕ್ಕ ಹಾಕಿದರೆ ಶೆಟ್ಟಿಗೆ ನಷ್ಟ. 'ಸಾಲ ಕೊಟ್ಟವನು ಕೆಟ್ಟ' ಎಂಬ ಗಾದೆ ಮಾತು ಶೆಟ್ಟಿಗೆ ತಿಳಿದಿದೆ. ಆದ್ದರಿಂದಲೇ ಅವನು ನ್ಯಾಯ ನಿಷ್ಠುರಿಯಾಗೇ ಇರುತ್ತಾನೆ. ದಾಕ್ಷಿಣ್ಯಕ್ಕೆ ದಕ್ಷಿಣೆ ಒದಗಿಸುವುದಿಲ್ಲ.

ಇನ್ನು ಗಿರಾಕಿ ಕೊಡುವ ನಾಣ್ಯವನ್ನೂ ಅಷ್ಟೆ ಶೆಟ್ಟಿ ಚೆನ್ನಾಗಿ ಪರೀಕ್ಷಿಸದೆ ತೆಗೆದುಕೊಳ್ಳುವುದಿಲ್ಲ. ಏಕೆಂದರೆ ಕೆಲವರು 'ಖೋಟಾ' ನೋಟು ಕೊಡುವುದುಂಟು. ಅದಕ್ಕೇ ಅವನು ನಾಣ್ಯ 'ಸಾಚಾ' ಇದ್ದರೆ ಮಾತ್ರ ಸಾಮಾನು ಕೊಡುತ್ತಾನೆ.

ಮಹಾದೇವ ಶೆಟ್ಟಿಯ ಅಂಗಡಿಯ ಮತ್ತೊಂದು ವಿಶೇಷ ವೆಂದರೆ, ಅದು ಸದಾ ತೆರೆದಿರುವುದು. ಅದು ಹಗಲು ರಾತ್ರಿ ನಿರಂತರ ಸೇವೆಯ ಅಂಗಡಿ. ಆ ವಿಶೇಷದಲ್ಲಿ ವಿಶೇಷವೆಂದರೆ ದಿನದ ಇಪ್ಪತ್ತುನಾಲ್ಕು ಘಂಟೆಗಳೂ ಶೆಟ್ಟಿ ತಾನೇ ಅಂಗಡಿಯಲ್ಲಿ ಕುಳಿತಿರುವುದು. ವಾರದ ರಜೆಯೆಂಬುದಿಲ್ಲ, ಬಾಗಿಲು ಮುಚ್ಚು ವುದೇ ಇಲ್ಲ. ಈ ಶೆಟ್ಟಿ ಸಹಾಯಕ್ಕಾದರೂ ಸೇವಕರನ್ನು ಇಟ್ಟುಕೊಂಡಿಲ್ಲ. ಆಳು ಮಾಡಿದ್ದು ಹಾಳು ಎಂಬುದನ್ನು ಈತ ಬಲ್ಲ. ಇಲ್ಲಿ ದಲ್ಲಾಳಿಗಳಂತೂ ಸುಳಿಯುವಂತಿಲ್ಲ.

ಮಹಾದೇವ ಶೆಟ್ಟಿಯ ಅಂಗಡಿಯ ಈ ಕಟ್ಟುನಿಟ್ಟುಗಳನ್ನೆಲ್ಲ ಗಮನಿಸಿದರೆ ಇದೊಂದು 'ವಿಚಿತ್ರ' ಅಂಗಡಿ ಎನಿಸದಿರದು. ಎಂತಲೇ ಇವನ ಅಂಗಡಿಗೆ ಬರುವ ಗಿರಾಕಿಗಳು ಕಡಿಮೆ. ಚೌಕಾಶಿಗೆ ಅವಕಾಶವಿಲ್ಲದ ಕಾರಣ ಇಲ್ಲಿ ಉಳಿದ ಅಂಗಡಿಗಳಂತೆ ಬಳಕೆದಾರರ ನೂಕು ನುಗ್ಗಲಿರುವುದಿಲ್ಲ. ಆದರೂ ಈ ಶೆಟ್ಟಿಗೆ ಬೇಸರವಿಲ್ಲ. ಇನ್ನೊಂದು ಅಂಗಡಿಯ ಎಡೆಬಿಡದ ವ್ಯಾಪಾರ ಕಂಡು ಹೊಟ್ಟೆಕಿಚ್ಚಿಲ್ಲ. ಉಳಿದ ಅಂಗಡಿಗಳನ್ನೆಲ್ಲ ಸುತ್ತಿ, ಅಲ್ಲಿ ಸಿಕ್ಕದ ವಸ್ತುಗಳಿಗಾದರೂ ತನ್ನ ಅಂಗಡಿಗೆ ಗಿರಾಕಿಗಳು ಯಾವಾಗ ಲಾದರೂ ಬಂದೇ ಬರುತ್ತಾರೆಂಬುದು ಶೆಟ್ಟಿಗೆ ಚೆನ್ನಾಗಿ ತಿಳಿದಿದೆ. ಎಂತಲೇ, ಅವನು ಅಂಗಡಿ ಮುಚ್ಚಿರುವುದಿಲ್ಲ.

ಇದೆಲ್ಲ ವಚನದ ವಾಚ್ಯಾರ್ಥವಾಯಿತು. ಆದರೆ ಅದರ ಲಕ್ಷ್ಯಾರ್ಥ ಬೇರೆಯೇ ಇದೆ. ವಚನವೇ ಹೇಳುವಂತೆ ಇಲ್ಲಿ ಧರಣಿಯ ಮೇಲೆ ಅಂಗಡಿ ಇಟ್ಟಿರುವ ವರ್ತಕ ಮಹಾದೇವ.





ಅವನು ಮತ್ತಾರೂ ಅಲ್ಲ, ಸಕಲ ಜಗತ್ತಿನ ಕಾರಣಶಕ್ತಿಯಾದ ಭಗವಂತ. ಇಲ್ಲಿನ ಗಿರಾಕಿ ಅಥವಾ ಬಳಕೆದಾರ ಭಕ್ತ. ಭಗವಂತನ ಅಂಗಡಿಯಲ್ಲಿರುವ ವಸ್ತುಗಳು ನಮ್ಮ ಕಣ್ಣಿಗೆ ಕಾಣುವ ಇತರ ಭೌತಿಕ ವಸ್ತುಗಳಂತಲ್ಲ. ಇದು ಯಾವುದೇ ಬಂಡವಾಳ ಹೂಡದ ಅಂಗಡಿ. ಲಾಭ ನಷ್ಟದ ಮಾತೇ ಅಲ್ಲಿಲ್ಲ. ಹೂಡುವ ಬಂಡವಾಳ ವಿಲ್ಲ. ಆದರೂ ಸದಾ ಸಿದ್ಧ ದಾಸ್ತಾನು.

ಈ ಅಂಗಡಿಯಿಂದ ಪಡೆಯುವ ವಸ್ತುಗಳನ್ನಿಟ್ಟುಕೊಳ್ಳಲು ಚೀಲವೂ ಬೇಕಿಲ್ಲ, ಪೆಟ್ಟಿಗೆಯೂ ಬೇಕಿಲ್ಲ. ಚೀಲ ಹರಿದು ಸಾಮಾನು ಸೋರುವ ಭಯವಿಲ್ಲ. ಪೆಟ್ಟಿಗೆ ಒಡೆದು ವಸ್ತು ಚೆಲ್ಲಿ ಹೋಗುವ ಚಿಂತೆಯಿಲ್ಲ. ಹೊರುವ ಭಾರವಿಲ್ಲ, ತೆರುವ ಸುಂಕವಿಲ್ಲ.

ಹಾಗಾದರೆ ಭಗವಂತನ ಈ ಅಂಗಡಿಯಲ್ಲಿರುವ ವಸ್ತು ಗಳಾದರೂ ಯಾವುವು? ದೈವ ಕಾರುಣ್ಯ, ಜೀವನ ವಿಶ್ವಾಸ, ಚಿತ್ತಶಾಂತಿ, ಕ್ರಿಯಾಚೇತನ, ಸತ್ವಗುಣ, ಲೋಕದೃಷ್ಟಿ ಈ ಎಲ್ಲ ಕಣ್ಣಿಗೆ ಕಾಣದ, ಕೈಯಲ್ಲಿ ಹಿಡಿಯಲಾಗದ ಅಮೂಲ್ಯ ವಸ್ತುಗಳ ಅನುಭಾವದ ಭಂಡಾರ ಮಹಾದೇವನ ಅಂಗಡಿ.

ಇಲ್ಲಿನ ವಿಶೇಷವೆಂದರೆ ಇದು ಬಂಡವಾಳ ಹೂಡಿದ ಅಂಗಡಿಯಾದರೂ, ಇಲ್ಲಿನ ವಸ್ತುಗಳನ್ನು ಪಡೆಯುವ ಭಕ್ತನಿಗೆ ಬಂಡವಾಳದ ಅಗತ್ಯವಿದೆ. ಆ ಬಂಡವಾಳವೆಂದರೆ, ಅವನು ತೆರಬೇಕಾದ ಬೆಲೆಯೆಂದರೆ ಕೇವಲ ಶ್ರದ್ಧೆ, ನಿಷ್ಠೆ ಮತ್ತು ಅರ್ಪಣಾ ಭಾವದ ಭಕ್ತಿ. ಇವೂ ಅಷ್ಟೆ ಕಣ್ಣಿಗೆ ಕಾಣದ ನಾಣ್ಯಗಳು. ಕಾಣದ ನಾಣ್ಯಗಳಿಂದ ಕಾಣದ ವಸ್ತುಗಳನ್ನು ಕೊಳ್ಳುವ ವ್ಯವಹಾರ ನಡೆಯುವುದು ಈ ಭಗವಂತನ ಅಂಗಡಿಯೊಂದರಲ್ಲೇ.

ಈ ವ್ಯಾಪಾರಿ ಗಿರಾಕಿಗಳಿಗೆ ಒಂದು ನೀತಿಯಿದೆ; ಧರ್ಮವಿದೆ. ಪರಸ್ಪರ ವಿಶ್ವಾಸವಿದೆ. ವರ್ತಕ ಭಗವಂತ ಗಿರಾಕಿ ಭಕ್ತನಿಂದ ನಿರೀಕ್ಷಿಸುವ ಬೆಲೆಯೆಂದರೆ ನಿಜನಿಷ್ಠೆ. 'ಕಿಡುವೊಡಲ ನಚ್ಚಿ, ಕಡು ಹುಸಿಯನೆ ಹುಸಿದು, ಒಡಲ ಹೊರೆಯುವ' ಗಿರಾಕಿ ಬಂದರೆ ಮಹಾದೇವ ಮಾತನ್ನೇ ಆಡುವುದಿಲ್ಲ. 'ನಂಬಿ ಕರೆದರೆ' ಮಾತ್ರ ಇತ್ತ ತಿರುಗಿ ನೋಡುತ್ತಾನೆ; ಮತ್ತೇನು ಬೇಕೆಂದು ಕೇಳುತ್ತಾನೆ. 'ಒಮ್ಮನವಾದರೆ ಒಡನೆ ನುಡಿವನು' ಎನ್ನುವ ಮಾತು, ಭಕ್ತನಲ್ಲಿ ಏಕನಿಷ್ಠೆಯಿದ್ದರೆ ಮಾತ್ರ ಭಗವಂತನ ಕಾರುಣ್ಯ ಪಡೆಯಲು ಸಾಧ್ಯ ಎಂಬುದನ್ನು ಸೂಚಿಸುತ್ತದೆ. 'ಇಮ್ಮನವಾದರೆ ನುಡಿಯನು' ಎನ್ನುವುದು ಚಂಚಲ ಮನಸ್ಸಿನ ಭಕ್ತಿಯನ್ನು ಭಗವಂತ ತಿರಸ್ಕರಿಸುತ್ತಾನೆ ಎಂಬ ಧ್ವನಿಸೂಚಕವಾಗಿದೆ. 'ಕಾಣಿಕೆಯ ಸೋಲ ಅರ್ಧ ಕಾಣಿಯ ಗೆಲ್ಲ' ಎನ್ನುವ ಮಾತು ಭಕ್ತನ ಶ್ರದ್ಧಾನಿಷ್ಠೆಗಳ ಬಗೆಗೆ ಭಗವಂತ ರಾಜಿಮಾಡಿಕೊಳ್ಳುವುದಿಲ್ಲ ಎಂಬುದನ್ನು ತಿಳಿಸುತ್ತದೆ. ಭಕ್ತನ ಶ್ರದ್ಧಾ ನಿಷ್ಠೆಗಳಲ್ಲಿ ಕಿಂಚಿತ್ತು ಅಳುಕಿದ್ದರೂ ಭಗವಂತ ಒಪ್ಪುವುದಿಲ್ಲ. ಆಡಂಬರವಿದ್ದರೂ ಸ್ವೀಕರಿಸುವುದಿಲ್ಲ. ಅಲ್ಲಿ ಹೆಚ್ಚು ಕಡಿಮೆಗಳು ಇರುವಂತಿಲ್ಲ. ಅವು ಸತ್ಯ ಶುದ್ಧವಾಗಿರಬೇಕು; ಸಹಜವಾಗಿರಬೇಕು.

ಭಕ್ತಿ ಶ್ರದ್ಧೆಗಳಿಲ್ಲದೆ ಭಗವಂತನನ್ನು ಪೂಜಿಸಿದರೆ ಏನು ಬಂತು? ಬಸವಣ್ಣನೇ ತನ್ನ ಇನ್ನೊಂದು ವಚನದಲ್ಲಿ ಹೇಳುತ್ತಾನೆ :

*ಅಳಿವುತ್ತ ಅಳಿವುತ್ತ ಬಳಲುವರಲ್ಲದೆ ಕೊಳಗ ಬಳಲುವುದೆ?*
*ನಡೆವುತ್ತ ನಡೆವುತ್ತ ಬಳಲುವರಲ್ಲದೆ ಬಟ್ಟೆ ಬಳಲುವುದೆ?*
*ಶ್ರಮವ ಮಾಡುತ್ತ ಮಾಡುತ್ತ ಬಳಲುವರಲ್ಲದೆ ಕೋಲು ಬಳಲುವುದೆ?*
*ನಿಜವನರಿಯದ ಭಕ್ತ ಬಳಲುವನಲ್ಲದೆ ಲಿಂಗ ಬಳಲುವುದೆ?*
*ಕೂಡಲಸಂಗಮದೇವಾ ಅದರಿಯದ ಬಟ್ಟೆಯೊ?*

ಆದ್ದರಿಂದ ಶಿವಕಾರುಣ್ಯಕ್ಕೆ ನಿಜಭಕ್ತಿಯ ಬೆಲೆ ತೆರಬೇಕು. ಆ ಭಕ್ತಿ ನಿಷ್ಠೆಗಳಲ್ಲಿ ಕೊರತೆಯಿದ್ದರೆ ದೈವ ಕಾರುಣ್ಯ ದೊರಕದ ಮಾತು. ಈ ದೃಷ್ಟಿಯಿಂದ ಭಕ್ತನಲ್ಲಿ ದೃಢಸಂಕಲ್ಪವಿರಬೇಕು. ಎಂತಹ ಸಂಕಲ್ಪವಿರಬೇಕೆಂದರೆ –

*'ಭಕ್ತ ಸುಭಾಷೆಯ ನುಡಿಯ ನುಡಿವೆ, ನುಡಿದಂತೆ ನಡೆವ*
*ನಡೆಯೊಳಗಾಗಿ ನುಡಿಯ ಪೂರೈಸುವ*
*ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ*
*ಒಂದು ಜವೆ ಕೊರತೆಯಾದಡೆ ಎನ್ನನದ್ದಿ*
*ನೀನೆದ್ದು ಹೋಗಾ ಕೂಡಲಸಂಗಮದೇವಾ'*

ಎಂದು ಹೇಳುವಂತಿರಬೇಕು. ಇದೂ ಬಸವಣ್ಣನ ವಾಣಿಯೇ. ಇಲ್ಲಿನ ಸ್ವಾರಸ್ಯ ನೋಡಿ. ಅಂಗಡಿಯ ಭಗವಂತ ಕಾಣಿಯ ಸೋಲದ ಅರ್ಧ ಕಾಣಿಯ ಗೆಲ್ಲದ ಕಟ್ಟುನಿಟ್ಟಿನ ವರ್ತಕನಾಗಿರು ವಂತೆ ಗಿರಾಕಿ ಭಕ್ತನೂ ಅಷ್ಟೇ ಕಟ್ಟುನಿಟ್ಟಿನವ. ಒಂದು ಜವೆ ಕೊರತೆಯಾದರೂ ನೀನು ಒಪ್ಪಿಕೊಳ್ಳಬೇಕಾಗಿಲ್ಲ ಎನ್ನುವ ದಿಟ್ಟತನ. ಕೊಡುವ ಕೊಳ್ಳುವ ಇಬ್ಬರಲ್ಲೂ ಕಂಡು ಬರುವ ಈ ಕಟ್ಟುನಿಟ್ಟಿನ ಗಟ್ಟಿತನ ಲೌಕಿಕ ವ್ಯವಹಾರದಲ್ಲಿ ಊಹೆಗೂ ನಿಲುಕದ ಮಾತು.

'ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ' ವಚನದಲ್ಲಿ ಬರುವ ಒಮ್ಮನ ಇಮ್ಮನ ಶಬ್ದಗಳಂತೂ ಅತ್ಯಂತ ಅರ್ಥಪೂರ್ಣವಾಗಿವೆ, ಭಾವಗರ್ಭಿತವಾಗಿವೆ. ಗಣಿತಶಾಸ್ತ್ರದಲ್ಲಿ ೧+೧=೨ ಆಗುತ್ತದೆ. ಅದು ಗಣಿತದ ಲೆಕ್ಕಾಚಾರ. ಆದರೆ ಜೀವ-ದೇವ ಸಂಬಂಧದ ಆಧ್ಯಾತ್ಮಿಕ ಅನುಭಾವದ ಸಂಕಲನದಲ್ಲಿ ೧+೧= ಒಂದೇ ಆಗುತ್ತದೆ. ಅದು ಹೇಗೆ?

ನಿಜ. ಒಂದು ಕಡ್ಡಿಗೆ ಇನ್ನೊಂದು ಕಡ್ಡಿ ಸೇರಿದರೆ ಎರಡು ಕಡ್ಡಿಗಳಾಗುತ್ತವೆ. ಒಂದು ಕಾಸಿಗೆ ಇನ್ನೊಂದು ಕಾಸು ಸೇರಿದರೆ ಎರಡು ಕಾಸುಗಳಾಗುತ್ತವೆ. ಒಬ್ಬನ ಜೊತೆಗೆ ಇನ್ನೊಬ್ಬ ಸೇರಿದರೆ ಇಬ್ಬರಾಗುತ್ತಾರೆ. ಆದರೆ ನೀರಿನ ಒಂದು ಹನಿಗೆ ಇನ್ನೊಂದು ಹನಿ ನೀರು ಸೇರಿದರೂ ಅವು ಎರಡಾಗದೆ ಒಂದೇ ಆಗುತ್ತವೆ ! ಹೀಗೆ ಜೀವ-ದೇವರ ಸಂಬಂಧ; ಗಂಡ ಹೆಂಡತಿ ಮನ ಒಂದಾದರೆ, 'ನಂದಾದೀಪವೋ ಮಲ್ಲಯ್ಯ' ಎಂಬ ಜನಪದ ನುಡಿ ಈ ಒಮ್ಮನದ ಸಂದೇಶವನ್ನು ತುಂಬ ಪರಿಣಾಮಕಾರಿಯಾಗಿ ತಿಳಿಸುತ್ತದೆ.

ಇಮ್ಮನ ಒಡೆದ ಮಡಕೆಯಂತೆ, ಮತ್ತೆ ಕೂಡಿಸಲು ಬಾರದು. ಒಡೆದ ಕನ್ನಡಿಯಂತೆ, ಮತ್ತೆ ನೋಡಲು ಬಾರದು. ಹರಿದ ಜೋಳಿಗೆಯಂತೆ, ಮತ್ತೆ ತುಂಬಲು ಬಾರದು. ಒಮ್ಮನ ಕಿರಣ-ಬೆಳಕಿದ್ದಂತೆ; ಕಬ್ಬು-ಸಿಹಿಯಿದ್ದಂತೆ. ಬಿಚ್ಚಿ ಬೇರ್ಪಡಿಸ ಲಾಗದ ಸಂಬಂಧ.

ಹಾಗೆಯೇ, ಇಲ್ಲಿ ಕೊಡುವ ದೈವ, ಪಡೆಯುವ ಜೀವ ಎರಡೂ ಒಮ್ಮನದಿಂದ ಕೂಡಿರುತ್ತದೆ. ದೇವ-ಜೀವರ ಮಧ್ಯೆ ನಡೆಯುವುದು ವಾಣಿಜ್ಯ ವ್ಯವಹಾರವಲ್ಲ, ಅವಿಭಾಜ್ಯ ಸಂಬಂಧ. ಇಲ್ಲಿ ಧನಕ್ಕೆ ಮನ ಒಡ್ಡುವುದೂ ಇಲ್ಲ, ಮನಕ್ಕೆ ಧನ ಒಡ್ಡುವುದೂ ಇಲ್ಲ. ಇಲ್ಲಿ ಕೊಡುವವನೂ ಇಲ್ಲ, ಪಡೆಯುವವನೂ ಇಲ್ಲ, ಲಿಂಗಭಾವವೂ ಇಲ್ಲ, ಅಂಗಭಾವವೂ ಇಲ್ಲ. ಕೊಡುವವನು ನಿಸ್ಸೀಮ; ಪಡೆಯುವವನು ನಿಜೈಕ್ಯ! ಬಸವಣ್ಣ ವಚನವನ್ನು ಎಷ್ಟು ಬೇಕಾದರೂ ಹಿಗ್ಗಿಸಿ ನಾವೂ ಹಿಗ್ಗಬಹುದು.

ಇದುವರೆಗೆ ವಿಚಾರಮಾಡಿದ ವಚನದಲ್ಲಿ ಭಗವಂತ ವರ್ತಕ, ಭಕ್ತ ಬಳಕೆದಾರ, ಆದರೆ ಬಸವಣ್ಣ ತನ್ನ ಇನ್ನೊಂದು ವಚನದಲ್ಲಿ ಭಕ್ತರನ್ನೇ ವ್ಯಾಪಾರಿಗಳನ್ನಾಗಿ ಮಾಡಿ, ಭಗವಂತನನ್ನೇ ಬಳಕೆದಾರರನ್ನಾಗಿ ಮಾಡಿರುವ ಒಂದು ಸ್ವಾರಸ್ಯವಿದೆ:

*ದಾಸನ ವಸ್ತ್ರವ ಬೇಡದ ಮುನ್ನ*
*ತವನಿಧಿಯನಿತ್ತಡೆ ನಿಮ್ಮ ದೇವರೆಂಬೆ.*
*ಸಿರಿಯಾಳನ ಮಗನ ಬೇಡದ ಮುನ್ನ*
*ಕಂಚಿಯಪುರವ ಕೈಲಾಸಕ್ಕೊಯ್ದಡೆ ನಿಮ್ಮ ದೇವರೆಂಬೆ.*
*ಬಲ್ಲಾಳನ ವಧುವ ಬೇಡದ ಮುನ್ನ*
*ಸ್ವಯಂಲಿಂಗವ ಮಾಡಿದಡೆ ನಿಮ್ಮ ದೇವರೆಂಬೆ*
*ದೇಹಿ ನೀನು, ವ್ಯಾಪಾರಿಗಳು ನಮ್ಮವರು.*
*ಬೇಡು ಕೂಡಲಸಂಗಮದೇವಾ, ಎಮ್ಮವರ ಕೈಯಲು !*

ಪೌರಾಣಿಕ ಪ್ರಸಂಗಗಳನ್ನು ಉಲ್ಲೇಖಿಸುವ ಬಸವಣ್ಣ ಕೂಡಲಸಂಗಮದೇವನನ್ನು ಕುರಿತು 'ದಾಸಿಮಯ್ಯ, ಸಿರಿಯಾಳ ಬಲ್ಲಾಳರನ್ನು ಪರೀಕ್ಷಿಸಿ, ಅವರಿಂದ ಭಕ್ತಿಭಿಕ್ಷೆ ಬೇಡಿ ಪಡೆದು, ನಂತರ ಅವರಿಗೆ ಮುಕ್ತಿ ನೀಡಿದೆ. ನೀನೇನು ಹೆಚ್ಚು? ನೀನು ಭಕ್ತಿ ವ್ಯಾಪಾರಿ. ಅವರಿಂದ ಏನನ್ನೂ ಬೇಡದೆ, ಅವರಿಗೆ ನಿನ್ನ ಕಾರುಣ್ಯ ನೀಡಿದ್ದರೆ ನಿನ್ನನ್ನು ದೇವರೆನ್ನಬಹುದಿತ್ತು. ನೀನೂ ಒಬ್ಬ ಸಾಮಾನ್ಯ ಕಿರಾಣಿ ಅಂಗಡಿಯವ. ನಿನಗೆ ಕೊರತೆಯಿದ್ದರೆ ನಮ್ಮ ಭಕ್ತರನ್ನು ಬೇಡು. ನಿನ್ನನ್ನು ಪರೀಕ್ಷಿಸದೆಯೇ ಅವರು ನೀಡುತ್ತಾರೆ. ಅವರು ನಿನಗಿಂತ ಉದಾರಿಗಳು. ಪ್ರತಿಫಲವನ್ನು ಅಪೇಕ್ಷಿಸದೆ ನೀಡುವ ದಾನಿಗಳು' ಎಂದು ಹೇಳುವುದು ತುಂಬ ಸ್ವಾರಸ್ಯಕರವಾಗಿದೆ. ಈ ವಚನದಲ್ಲಿ ಬಸವಣ್ಣ ಭಕ್ತನ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತಾನೆ ಎಂದರೆ ಭಕ್ತನಾದವನು ಆ ಎತ್ತರಕ್ಕೆ ಏರಬೇಕು. ದೇವರಿಗೆ ನೀಡುವ ಸಂಪತ್ತು ಗಳಿಸಬೇಕು.

ಲೌಕಿಕ ನಡವಳಿಕೆಯನ್ನು ಉಪಮಾನವಾಗಿ ಬಳಸಿಕೊಂಡು ಅಲೌಕಿಕ ಉಪಮಿತಿಯನ್ನು ತಿಳಿಸುವ ಬಸವಣ್ಣನ ವಚನರಚನಾ ಪ್ರತಿಭೆ ನಿಜಕ್ಕೂ ವಿಶಿಷ್ಟವಾದುದು. ಇಂದಿನ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಬಸವಣ್ಣನ ವಚನಗಳನ್ನು ನಾವು ಪುನರ್ ಮನನ ಮಾಡಿಕೊಳ್ಳಬೇಕಾಗಿದೆ.

ಇಂದಿನದು ಕೇವಲ ವಾಣಿಜ್ಯಯುಗ, ವಿಶ್ವಮಾರುಕಟ್ಟೆಯ ಯುಗ. ಎಲ್ಲೆಲ್ಲೂ ಅಂಗಡಿಗಳೇ. ಎಲ್ಲರೂ ವರ್ತಕರೇ. ಆದರೆ, ಈಗಿನವೆಲ್ಲ ಲಾಭದ ಅಂಗಡಿಗಳು, ಲೋಭದ ಅಂಗಡಿಗಳು, ಶೋಷಣೆಯ ಅಂಗಡಿಗಳು, ನಕಲಿ ವಸ್ತುಗಳ ಅಂಗಡಿಗಳು. ಈ ಅಂಗಡಿಗಳ ಅವಾಂತರದಲ್ಲಿ ಬಳಕೆದಾರರೆಲ್ಲ ಮುಂದಾಣ ದಾಗಿದ್ದಾರೆ. ತುಂಬ ದುರಂತದ ಸಂಗತಿಯೆಂದರೆ ಭೌತಿಕ ಬಳಕೆಯ ವಸ್ತುಗಳ ಜೊತೆಗೆ ನೈತಿಕ ದ್ರವ್ಯಗಳಾದ ಶಿಕ್ಷಣ, ಮಾಹಿತಿ, ಕಲೆ, ಸಾಹಿತ್ಯ ಎಲ್ಲವೂ ಈಗ ಜಾಗತಿಕ ಮಾರಾಟಕ್ಕಿರುವುದು. ಎಲ್ಲ ಕ್ಷೇತ್ರದಲ್ಲೂ ಭಾರಿ ಪ್ರಮಾಣದ ಬಂಡವಾಳ ಹೂಡುವ ಸ್ಪರ್ಧೆಯೇ ನಡೆದಿದೆ. ಬಂಡವಾಳ ಹೂಡಿಕೆಯೆಂದರೆ ಲಾಭದ ಗುರಿಯೇ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ಬಂಡವಾಳ ಹೂಡಿದವರ ಕೈ ಸಹಜವಾಗಿ ಮೇಲಾಗುತ್ತದೆ. ಏರುತ್ತಿರುವ ಬೆಲೆ ತೆರಲಾರದೆ ಬಳಕೆದಾರ ನರಳುತ್ತಾನೆ. ಇದು ಇಂದಿನ ಲೌಕಿಕ ವ್ಯವಹಾರದ ಪ್ರವಾಹ. ಇದನ್ನು ತಡೆಗಟ್ಟಲು ಸಧ್ಯಕ್ಕಂತೂ ಸಾಧ್ಯವಿರುವಂತೆ ಕಾಣುವುದಿಲ್ಲ.

ಜಾಗತೀಕರಣದ ಪ್ರವಾಹದಲ್ಲಿ ಮೊದಲು ನುಗ್ಗಿರುವುದು ಮುಕ್ತಮಾರುಕಟ್ಟೆ, ಮಾರುಕಟ್ಟೆಯನ್ನು ಮುಕ್ತಗೊಳಿಸುವುದೆಂದರೆ ಭಾರತದಂತಹ ದೇಶದಲ್ಲಿ ರಫ್ತಿಗಿಂತ ಆಮದಿನ ಬಾಗಿಲೇ ದೊಡ್ಡದಾಗುವ ಸಂಭವವಿದೆ. ಈ ಭರದಲ್ಲಿ ಮಧ್ಯವರ್ತಿಗಳು ಮಿತಿಮೀರಿ ಮೆರೆಯುವುದರಲ್ಲಿ ಸಂಶಯವಿಲ್ಲ. ಇಂತಹ ಸನ್ನಿವೇಶದಲ್ಲಿ ಸ್ವಾವಲಂಬನೆಯ ಸೂತ್ರ ಹೇಳಿದ, ಕಾಯಕಷ್ಟದಿಂದ ದುಡಿಮೆ ಮಾಡಬೇಕೆಂದು ತಿಳಿಸಿದ, ದೀನ ದುರ್ಬಲರೊಡನೆ ನಮ್ಮ ಗಳಿಕೆಯನ್ನು ಹಂಚಿಕೊಳ್ಳಬೇಕೆಂದ, ಎಲ್ಲಕ್ಕಿಂತ ಮಿಗಿಲಾಗಿ ಸತ್ಯ ಶುದ್ಧ ಸಾತ್ವಿಕ ಬದುಕನ್ನು ನಡೆಸಬೇಕೆಂದ ಬಸವಣ್ಣನ ವಿಚಾರಧಾರೆ ಯತ್ತ ನಾವು ಗಂಭೀರ ಗಮನ ಹರಿಸುವ ಅಗತ್ಯವಿದೆ.

ಇಂದಿನ ಗೊಂದಲಮಯ ಹಾಗೂ ನೀತಿಹೀನ ಬದುಕಿಗೆ ಲೌಕಿಕ ವ್ಯಾಪಾರದ ಅಂಗಡಿಗಳಿಗಿಂತ ಬಸವಣ್ಣ ಹೇಳುವ ಮಹಾದೇವ ಶೆಟ್ಟಿಯ 'ಹಿರಿದಪ್ಪ ಅಂಗಡಿ'ಗಳ ಅಗತ್ಯ ಹೆಚ್ಚಾಗಿದೆ. ಈ ಆಧ್ಯಾತ್ಮಿಕ ಅಂಗಡಿಗೆ ಹೋಗಲು ಶ್ರದ್ಧೆಯೊಂದಿದ್ದರೆ ಸಾಕು. ಅಲ್ಲಿ ನಮಗೆ ಬೇಕಾದ ಶುದ್ಧ ವಸ್ತು ಸಿಗುತ್ತದೆ. ಆ ಅನುಭಾವದ ವಸ್ತು ಒಮ್ಮೆ ನಮ್ಮ ಕೈಗೆ ಬಂದರೆ ಕಳೆದುಹೋಗುವ ಭಯವಿಲ್ಲ; ಅದು ಬೆಳೆಯುತ್ತಲೇ ಹೋಗುತ್ತದೆ.

*







# ಅತ್ತೆ-ಸೊಸೆ

– ಎಂ.ಜಿ. ನಾಗರಾಜ್
ಸಂಪಾದಕರು, ಮಹಾಮನೆ
221, 68ನೇ ಕ್ರಾಸ್, 5ನೇ ಬ್ಲಾಕ್
ರಾಜಾಜಿನಗರ, ಬೆಂಗಳೂರು-560 010

ಅತ್ತೆ-ಸೊಸೆ ಇಬ್ಬರೂ ಹೆಂಗಳೆಯರೆ. ಮದುವೆಯ ಸಂದರ್ಭ ದಿಂದಲೇ ಅವರಿಬ್ಬರ ಸಂಬಂಧ ಶುರುವಾಗುತ್ತದೆ. ಅತ್ತೆ ಹಿರಿಯಾಕೆ. ಅನುಭವದಲ್ಲಿ ಪಳಗಿದಾಕೆ. ಮಾನಸಿಕವಾಗಿ ಮಾಗಿದಾಕೆ. ಸೊಸೆ ಕಿರಿಯಾಕೆ. ಅನುಭವ ಪಡೆಯಬೇಕಾದಾಕೆ. ತನ್ನ ಕನಸುಗಳನ್ನು ನನಸು ಮಾಡಿಕೊಳ್ಳಲು ಆಶಿಸುವಾಕೆ. ಸದ್ಯಕ್ಕಾದರೂ ಶೃಂಗಾರದ ಬದುಕನ್ನು ಆಕೆಗೆ ಸವಿಯುವಾಸೆ.

ಅತ್ತೆ ಸೊಸೆಯರ ಸಂಬಂಧ ತಾಯಿ ಮಗಳಂತಿದ್ದಾಗ ಇವೆಲ್ಲ ಸಹಜವಾಗಿ ನಡೆದು ಹೋಗುತ್ತವೆ. ಅದು ಹದಗೆಟ್ಟರೆ ಎಲ್ಲವೂ ಕಿರಿಕಿರಿ. ಅದೇ ಮನೋವೈಜ್ಞಾನಿಕ ವಿವೇಚನೆಗೆ ಸಲ್ಲುವಂಥದ್ದು. ಅತ್ತೆಗೆ ತಾನು ಹೆತ್ತು ಹೊತ್ತು ಸಾಕಿದ ಮಗ ಮದುವೆ ಆಗುವವರೆ ವಿಗೆ ತನ್ನ ಮಾತು ಕೇಳುತ್ತಿದ್ದ. ಮದುವೆ ಆದ ಮೇಲೆ ಮಗ ಏಕೆ ಹೀಗಾದ ಎಂಬ ಆಕೆಯ ಸಮಸ್ಯೆಗೆ ತಕ್ಷಣದ ತುತ್ತು ಸೊಸೆಯೆ ಎಂದು ಕಾಣತೊಡಗುತ್ತದೆ. ತನ್ನ ಅಧಿಕಾರವನ್ನು ಕಸಿದವಳು ಅವಳೇ ಎಂದು ಭಾವಿಸುತ್ತಾಳೆ. ನೈಸರ್ಗಿಕ ಸಹಜ ಕಾಮನೆಗಳ ತರುಣ ದಂಪತಿಗಳು ಎಂದು ಆಕೆ ಪರಿಭಾವಿಸುವುದು ಕಡಿಮೆ.

ಅಮ್ಮನ ಅಂಕೆಯಲ್ಲಿಯೇ ಬೆಳೆದ ಮಗ, ತಾಯಿ ಮತ್ತು ಹೆಂಡತಿಯ ನಡುವಣ ಸೇತುವಾದರೆ ಎಲ್ಲವೂ ಸೊಗಸು. ಇಲ್ಲವೆಂದರೆ ಕಡುಕಷ್ಟ. ತವರಿನಲ್ಲಿ ಸರಾಗ ಇತ್ತು. ಈಗ ಗಂಡನೊಡನೆ ಸರಾಗವಾಗಿ ನಲಿಯುವ ಅವಕಾಶಕ್ಕೆ ಅತ್ತೆಯೇ ಅಡ್ಡಿ ಎಂಬ ಭಾವನೆ ಸೊಸೆಯಾದವಳಿಗೆ ಬಂದರೆ ಕರಕಷ್ಟ, ಇಬ್ಬರೂ ಹೆಂಗಸರೇ ಆದರೂ ಪರಸ್ಪರ ಅವಿಶ್ವಾಸದ ಮನೋಸ್ಥಿತಿಯಲ್ಲಿ ಉಳಿದಿರುತ್ತಾರೆ. ಹೀಗಾಗಿ ಎರಡು ಹೆಣ್ಣು ತಲೆಗಳು ಎಂದೂ ಒಟ್ಟಾಗಿರುವುದಿಲ್ಲ ಎಂಬ ಗಂಡಸರ ಕೆಟ್ಟಗಾದೆ ಹುಟ್ಟಿದಂತಿದೆ.

ಉದ್ಯೋಗಕ್ಕೆ ಹೋಗುವ ಉಸಾಬರಿ ಇಲ್ಲದಿದ್ದರೆ ಅತ್ತೆಯದೋ, ಸೊಸೆಯದೋ ಅಧಿಕಾರ ಹೇಗೆ ಸಂಭಾಳಿಸಿ ಕೊಂಡು ನಡೆಯುತ್ತದೆ. ಸೊಸೆ ಉದ್ಯೋಗಸ್ಥೆ ಯಾಗಿದ್ದು, ಹೊರಗೂ, ಒಳಗೂ ದುಡಿಯಬೇಕಾದಾಗ ಅತ್ತೆಯತ್ತ ಗುರು ಗುರು ದೃಷ್ಟಿ ಬೀಳುತ್ತದೆ. ಒಳಗೆ ನೆರವಾಗುವ ಶಕ್ತಿ ಅತ್ತೆಗಿದ್ದಾಗ, ಕೈಲಾದಷ್ಟು ಸಾಂತ್ವನ ಸೊಸೆಗೆ ಒದಗಿಸಿದರೆ ಆಕೆಗೂ ಹರುಷವಾದೀತು. ವಯಸ್ಸಾದ, ನಿಶ್ಶಕ್ತಿಯ ಅತ್ತೆ ಇದ್ದಾಗ ಸೊಸೆಗೆ ಸಹನೆ ಇಲ್ಲದೆ ಕೂಗಾಡಿದರೆ ಎಲ್ಲರಿಗೂ ಪಿರಿಪಿರಿ ಆಗುತ್ತದೆ.

ಅತ್ತೆ ಸೊಸೆಯರ ಬಾಂಧವ್ಯ ಕುರಿತಂತೆ ನಮ್ಮಲ್ಲಿ ಪ್ರಾಚೀನ ಉದಾಹರಣೆಗಳಿವೆ. ಋಗ್ವೇದ ಕಾಲದಲ್ಲಿ ಹೆಣ್ಣು, ಶಕ್ತಿ ಮತ್ತು ಔದಾರ್ಯದ ಪ್ರತೀಕವಾಗಿದ್ದಳು. ಋಗ್ವೇದ ಕಾಲದ ಹೆಣ್ಣು ಘೋಷಾಳಿಗೆ ಮದುವೆಯ ಸಂದರ್ಭದಲ್ಲಿ ಪುರೋಹಿತನ ಆಶೀರ್ವಾದದ ಮಾತುಗಳು ಇಂತಿವೆ : ಅತ್ತೆ, ಮಾವ, ನಾದಿನಿ, ಮೈದುನರಿಗೆ ಸಾಮ್ರಾಜ್ಞಿಯಾಗಿರು. ಮನೆಯ ಪರಿವಾರದೊಂದಿಗೆ ಮನೆಯೊಡತಿಯ ಅಧಿಕಾರದೊಂದಿಗೆ ಮಾತನಾಡು, ಪಶುಪಕ್ಷಿಗಳ ವಿಷಯದಲ್ಲಿ ಹಿತದೃಷ್ಟಿಯಿಂದಿರು, ಎಂದೆಲ್ಲ ಸೊಸೆಯ ಸ್ಥಾನ, ನಡವಳಿಕೆಗಳನ್ನು ನಿರ್ದೇಶಿಸಲಾಗಿದೆ. ಇಂತೆಲ್ಲ ಬಗೆಗೆ ಬಹುಶಃ ಅತ್ತೆ ಮಾವಂದಿರ ವಾನಪ್ರಸ್ಥಾಶ್ರಮ ವಯಸ್ಸು ಕಾರಣವಿದ್ದಿರ ಬಹುದು. ಇಂದು ಅತ್ತೆ ಮಾವಂದಿರಿಗೆ ಇಂಥ ಪರಿಸರವಿದೆಯೆ? ಎಂಬುದಕ್ಕೆ ಉತ್ತರ ಕಷ್ಟ

ರಾಮಾಯಣದಲ್ಲಿ ಲಕ್ಷ್ಮಣಸತಿ ಊರ್ಮಿಲೆ ಗಂಡನ ಹಿತ, ದೈವಭಕ್ತಿಯ ಹೆಸರಿನಲ್ಲಿ ಹದಿನಾಲ್ಕು ವರ್ಷ ಅರಮನೆಯಲ್ಲಿಯೆ ಉಳಿದಳು. ತನ್ನೆಲ್ಲ ಕಾಮನೆಗಳನ್ನು ತಡೆದಿಟ್ಟುಕೊಂಡಳು. ಈ ಸಂದರ್ಭದಲ್ಲಿ ಅತ್ತೆಯರಾದ ಕೌಸಲ್ಯೆ, ಸುಮಿತ್ರ ಹಾಗೂ ಕೈಕೇಯಿ ಅವರುಗಳು ಎಷ್ಟೆಲ್ಲ ಸಾಂತ್ವನ ಹೇಳಿದರೂ, ತಾರುಣ್ಯದಲ್ಲಿ ಅಗಲಿಕೆ ಅನುಭವಿಸಿದವಳು ಊರ್ಮಿಳೆಯೆ !

ಗೌತಮಬುದ್ಧ, ಸಿದ್ಧಾರ್ಥನಾಗಿದ್ದಾಗ ಅವನ ಮಲತಾಯಿ ಹಾಗೂ ಸಾಕುತಾಯಿ ಅಪರಾಜಿತ, ಯಶೋಧರೆಯನ್ನು ಮಗನಿಗೆ ತಂದುಕೊಳ್ಳುವಾಗ ತೋರಿದ ಆಸಕ್ತಿ ತುಂಬು ಹೃದಯದ ಆಸಕ್ತಿಯಾಗಿತ್ತು. ಯಶೋಧರೆಯ ಅಂತಃಪುರಕ್ಕೆ ಬುದ್ಧ ಬಂದಾಗ ಅವಳಿಗೆ ಸ್ಥೈರ್ಯಗೊಟ್ಟವಳು ಅತ್ತೆ ಅಪರಾಜಿತೆಯೆ. ಒಂದು ಕಡೆ ಬುದ್ಧ ಎಲ್ಲ ಕಾಮನೆಗಳನ್ನು ತೊರೆದು ಸ್ಥಿತಪ್ರಜ್ಞನಾಗಿ, ಜಗತ್ತಿಗೆ ಗುರುವಾಗಿ, ಬೆಳಕಿನ ಬುದ್ಧನಾಗಿ ಬಂದು ನಿಂತಿದ್ದ. ಇನ್ನೊಂದು ಕಡೆ ಅಂಥ ಗಂಡನ ಸಿದ್ಧಿಯನ್ನು ಕೆಡಿಸಲಾಶಿಸದೆ, ಕೊನೆಯ ಬಾರಿಯೋ ಎಂಬಂತೆ ರಾಜವಧುವಿನ ವೇಷತೊಟ್ಟು ದುಃಖವನ್ನೆಲ್ಲ ಅದುಮಿಟ್ಟು ಕೊಂಡು ಸತ್ಕಾರಗೈಯಲು ಬಂದ ಯಶೋಧರೆ, ಬುದ್ಧನನ್ನು ನೋಡಿ ಸ್ತಂಭಿತಳಾಗಿ ನಿಂತುಬಿಟ್ಟಳು. ಈ ಮನೋಸ್ಥಿತಿಯ ಯಶೋಧರೆ ಯನ್ನೂ ಸಾಂತ್ವನಗೊಳಿಸಿ ಬುದ್ಧನ ಬಳಿಗೆ ಕರೆತರುವ ಅಪರಾಜಿತೆ ಅತ್ತೆಯಾಗಿ ಕಾಣುವುದಿಲ್ಲ. ಮಹಾತಾಯಿಯಾಗಿ ಯಶೋಧರೆಯ ಮುಂದಿನ ಬದುಕನ್ನು ನಿರ್ದೇಶಿದಳು. ಅದಕ್ಕೆ ಸ್ಪಂದಿಸಿದ ಯಶೋಧರೆ ಅಪರಾಜಿತೆಯ ಕರುಳಿನ ಮಗಳಾಗಿಬಿಟ್ಟಳು. ಇದು ಅತ್ತೆ ಸೊಸೆಯರ ಸುಂದರ ಬಾಂಧವ್ಯ.

❀

## ವಚನಗಳ ವಿಶ್ಲೇಷಣೆ

*ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯ !*
*ನಿನ್ನ ಸುತ್ತಿಪ್ಪುದು ನನ್ನ ಮನ ನೋಡಯ್ಯ !*
*ಜಗಕ್ಕೆ ಬಲ್ಲಿದ ನೀನು*
*ನಿನಗೆ ಬಲ್ಲಿದ ನಾನು ಕಂಡಯ್ಯ !*
*ಜಗವು ನಿನ್ನೊಳಗೆ, ನೀನು ನನ್ನೊಳಗೆ !*
*ಕರಿಯು ಕನ್ನಡಿಯೊಳಡಗಿದಂತಯ್ಯ*
*ನೀನೆನ್ನೊಳಡಗಿದೆ, ಕೂಡಲಸಂಗಮದೇವ !*

ಶಿವಶಕ್ತಿಯು ವಿಶ್ವವನ್ನೇ ವ್ಯಾಪಿಸಿಕೊಂಡಿರಬಹುದು. ಆದರೆ ಆ ಶಿವನನ್ನೇ ತನ್ನ ಅಂತರಂಗದಲ್ಲಿ ಅಡಗಿಸಿಕೊಂಡಿರುವವನು ಧ್ಯಾನಕೌಶಲದಿಂದ ಭಕ್ತ. ಇದನ್ನು ಕುರಿತು ಕ್ಷಣ ಮಾತ್ರವಾದರೂ ಸರಿಯೆ ಆಲೋಚಿಸಿದವರಿಗೆ ಅಚ್ಚರಿ ಎನಿಸದಿರದು ! ಸಾಂತವು ಅನಂತದಲ್ಲಿ ಅಡಗುವುದೇನೋ ಅದ್ಭುತವಲ್ಲ. ಆದರೆ ಸಾಂತವು ಅನಂತವನ್ನು ತನ್ನಲ್ಲಿ ಅಡಗಿಸಿಕೊಳ್ಳುವುದಿದೆಯಲ್ಲಾ ಅದು ಮಹದದ್ಭುತ ! ಸಾಂತನಾದ ಜೀವನಿಗೆ ಈ ಮಹದದ್ಭುತ ಸಾಮರ್ಥ್ಯ ಸಾಧ್ಯವಾದುದು ಆ ಶಿವಧ್ಯಾನದಿಂದಲೇ ಎಂದು ಹೇಳುವರು ಬಸವಣ್ಣನವರು. ಹಾಗೆ ಹೇಳುವಲ್ಲಿ ಅವರು ತಮಗೆ ಸಹಜವಾದ ವೀರಶೈಲಿಯಲ್ಲಿ– ದೇವರೇ ನೀನು ಜಗದ್ವ್ಯಾಪಿಯಿರಬಹುದು. ನಾನು ನಿನಗಿಂತಲೂ ವ್ಯಾಪಕ. ನಿನ್ನನ್ನೇ ನನ್ನ ಹೃದಯ ಕಮಲದಲ್ಲಿ ಸೆರೆ ಹಿಡಿದಿರುವೆನಲ್ಲಾ ಎಂದು ಧೀರನಾಗಿ ಸರಸವಾಡಿ, ಆನೆಯ ಬಿಂಬ ಎಷ್ಟೇ ದೊಡ್ಡದಾದರೂ ಅದನ್ನು ಪ್ರತಿಬಿಂಬ ಸೂತ್ರದಿಂದ ಗ್ರಹಿಸುವ ಕನ್ನಡಿಯ ಪ್ರತಿಭೆಯ ನಿದರ್ಶನವನ್ನು ಕೊಟ್ಟಿರುವರು.

ದೇವರು ದೊಡ್ಡವನಿರಬಹುದು; ಆದರೆ ದೈವಭಕ್ತನು ಕುಬ್ಜನಲ್ಲವೆಂಬುದೇ ಬಸವಣ್ಣನವರ ಧೀರ ನಿಲವು. ಅಂತರಂಗದ ಮತ್ತು ಬಹಿರಂಗದ ವಿರುದ್ಧ ಶಕ್ತಿಗಳೊಡನೆ ಅಡಿಗಡಿಗೂ ತುಯ್ದಾಡಿ ಹೊಯ್ದಾಡಿ ಊರ್ಧ್ವಪಥಗಾಮಿಯಾಗಬೇಕಾದ ಸಾಧಕಜೀವಕ್ಕೆ ಈ ವಿಧವಾದ ಆದಮ್ಯ ಅನುಪಮ ಆತ್ಮವಿಶ್ವಾಸವಿಲ್ಲದಿದ್ದರೆ ಹೇಗೆ?

*ಜಂಬೂದ್ವೀಪ-ನವಖಂಡ ಪೃಥ್ವಿಯೊಳಗೆ*
*ಕೇಳಿರಯ್ಯ – ಎರಡಾಳಿನ ಭಾಷೆಯ !*
*ಕೊಲುವೆನೆಂಬ ಭಾಷೆ ದೇವನದು !!.*
*ಗೆಲುವೆನೆಂಬ ಭಾಷೆ ಭಕ್ತನದು !!*
*ಸತ್ಯವೆಂಬ ಕೂರಲಗ ಕಳೆದುಕೊಂಡು*
*ಸದ್ಭಕ್ತರು ಗೆದ್ದರು ಕಾಣ ಕೂಡಲಸಂಗಮದೇವ !*

ಸತ್ವಶಾಲಿಯಾದುದು ಮತ್ತು ಆಗಬಲ್ಲುದು ಮಾತ್ರ ಉಳಿಯಬೇಕು, ಸತ್ವಹೀನವಾದುದು ಅಳಿಯಬೇಕು. ಇದು ಜಗಜ್ಜೀವನ ಸೂತ್ರ. ಅದಕ್ಕೆ ಸೂತ್ರಧಾರ ಶಿವನಾದರೆ ಆ ಸೂತ್ರಕ್ಕೆ ಬದ್ಧನಾಗಿರುವಾತನು ಜೀವ. ಸತ್ವಪರೀಕ್ಷೆಗೆಗಾಗಿ ಶಿವನು ಒಡ್ಡುವ ವ್ಯೂಹಗಳನ್ನೆಲ್ಲ ಜೀವನು ಭೇದಿಸಿ ವಿಜಯಿಯಾಗಿ ಹೊರಬರಬೇಕು. ಇಂತಹ ಸಾಹಸಕಾರ್ಯಕ್ಕಾಗಿ ಅವನು ಬಳಸಬೇಕಾದುದು ಸತ್ಯವನ್ನೇ ಹೊರತು ಕೌಟಿಲ್ಯವನ್ನಲ್ಲ, ಕೋರಿಕೆಯನ್ನೇ ಹೊರತು ತೋರಿಕೆಯನ್ನಲ್ಲ. ಪುರಾತನ ಭಕ್ತವರೇಣ್ಯರನೇಕರು ಈ ಸತ್ಯವೆಂಬ ಖಡ್ಗವನ್ನು ಹಿಡಿದೇ ಹಿಂದೆ ಯಶಸ್ವಿಗಳಾಗಿದ್ದಾರೆ.

ಅಥವಾ

ದೈವ ಮತ್ತು ಪೌರುಷ ಶಕ್ತಿಗಳೆರಡಕ್ಕೆ ಘರ್ಷಣೆಯಾದಾಗ ದೈವ ಕೊಲ್ಲುವೆನೆಂದರೆ ಪೌರುಷ ಗೆಲ್ಲುವೆನೆಂದು ಹೆಣಗಾಡಬೇಕು. ಪೌರುಷದ ತೋಳಿನಲ್ಲಿ ಸತ್ಯದ ಶಾತಖಡ್ಗವಿದ್ದರೆ ಅದಕ್ಕೆ ಜಯ ನಿಶ್ಚಯ; ಇದಕ್ಕೆ ಹಲವಾರು ಸದ್ಭಕ್ತರ ಸಾಹಸಮಯ ಜೀವನಗಳ ನಿದರ್ಶನವುಂಟು.

*ಉಳ್ಳವರು ಶಿವಾಲಯವ ಮಾಡಿಹರು !*
*ನಾನೇನ ಮಾಡುವೆ ಬಡವನಯ್ಯ !*
*ಎನ್ನ ಕಾಲೇ ಕಂಭ ! ದೇಹವೇ ದೇಗುಲ !*
*ಶಿರ ಹೊನ್ನ ಕಳಸವಯ್ಯ !*
*ಕೂಡಲ ಸಂಗಮದೇವ ಕೇಳಯ್ಯ –*
*ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ !*

ಶಿವಭಕ್ತಿಯನ್ನು ಸಾರಲು ಕೈಲಾಸಪರ್ವತಸ್ಪರ್ಧಿಯಾಗಿ ಕಟ್ಟಿಸಿದ ಮೂಕ-ನಿಶ್ಚೇಷ್ಟಶಿವಾಲಯಗಳು ಇಂದಿದ್ದು ನಾಳೆ ಕುಸಿಯಬಹುದು. ಆದರೆ ಭದ್ರೇಚ್ಛೆಯ ಮಂಗಳಾಕಾಂಕ್ಷೆಯ ಶಿವಜೀವಸಂತಾನ ನಿರ್ಮಿತವಾದರೆ, ಅವು ತಮ್ಮ ನುಡಿವಳಿಯಲ್ಲಿ ಮತ್ತು ನಡೆವಳಿಯಲ್ಲಿ ಶಿವಸಂದೇಶವನ್ನು ಆಚರಿಸಿ ತೋರಿ – ಸಂತತಿ ಸಂತತಿಯಾಗಿ ಸಂತತವಾಗಿರುವವು. ಈ ಸಂತಸಂತತಿಯ ನಿರ್ಮಾಣದ ಬಹಿಸ್ಸಂಪತ್ತನ್ನು ಅವಲಂಬಿಸಿದರೆ, ಸಂತ-ನಿರ್ಮಾಣ ಅಂತಸ್ಸಂಪತ್ತಿಯನ್ನು ಅವಲಂಬಿಸಿದೆ. ಮೊದಲನೆಯದು ಧನವ್ಯಯಮಾತ್ರ ಸಾಧ್ಯವಾಗಿರುವುದರ ಜೊತೆಗೆ ಅಶಾಶ್ವತವೂ ಹೌದು ! ಎರಡನೆಯದೋ, ಮನವ್ಯಯ. ಮಾತ್ರಸಾಧ್ಯವಾಗಿರುವುದರ ಜೊತೆಗೆ, ಅದು ಶಾಶ್ವತವೂ ಸುಲಭವೂ ಆಗಿದೆ. ಆದುದರಿಂದಲೇ ಬಸವಣ್ಣನವರು ಹೇಳುತ್ತಾರೆ– ದೇಹವೇ ದೇವಾಲಯವಾಗಬೇಕು. ಕಲಶಕ್ಕೆ ಕಂಭ ಆಧಾರವಾದಂತೆ, ಜ್ಞಾನಕ್ಕೆ ಆಚರಣೆ ಆಧಾರವಾಗಿ, ಅಲ್ಲಿ ದೇವರು ಬಂದು ನೆಲಸುವಂತಾಗಬೇಕು – ಎಂದು.

– ಸಂ. ಡಾ. ಎಲ್. ಬಸವರಾಜು
*(ಕೃಪೆ : ಬಸವ ವಚನಾಮೃತ)*





## ಬಾಗಿದ ತಲೆ ಮಾಗಿದ ದೇಹ

*– ಶ್ರೀ ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು*
ಶ್ರೀ ತರಳಬಾಳು ಬೃಹನ್ಮಠ, ಸಿರಿಗೆರೆ

ನಮ್ಮಲ್ಲಿ ಮಠ-ಪೀಠಗಳಿಗೆ, ಗುರು-ವಿರಕ್ತರಿಗೆ, ಜಗದ್ಗುರುಗಳಿಗೆ ಕೊರತೆಯಿಲ್ಲ. ಮಠಗಳು ಏನು ಮಾಡುತ್ತಿವೆ? ಅಲ್ಲಿರುವ ಮಠಾಧೀಶರು ಹೇಗೆ ಬದುಕುತ್ತಿದ್ದಾರೆ ಎಂಬ ಇತಿಹಾಸವನ್ನು ಹೆಕ್ಕಿ ತೆಗೆದರೆ ವಿಸ್ಮಯವನ್ನುಂಟುಮಾಡುವ ಆಶ್ಚರ್ಯಕರ ಸಂಗತಿಗಳು ಹೊರಬರುತ್ತವೆ. ನಮ್ಮ ಸಚ್ಚಾರಿತ್ರ್ಯ, ಸತ್ಕಾರ್ಯಗಳಿಂದ ಮಠದ ಘನತೆ, ಗೌರವ ಎತ್ತಿಹಿಡಿಯುವವರು ಕೆಲವು ಸ್ವಾಮಿಗಳಾದರೆ, ದುರ್ನಡತೆ, ದುಷ್ಕಾರ್ಯಗಳಿಂದಾಗಿ ಮಠದ ಕೀರ್ತಿಗೆ ಕಲಂಕ ತರುವ ಸ್ವಾಮಿಗಳೂ ಕಂಡುಬರುತ್ತಾರೆ. ಹೀಗಾಗಿ ಮಠ-ಪೀಠಗಳ, ಅಲ್ಲಿರುವ ಸ್ವಾಮಿಗಳ ಬಗೆಗೆ ಅಭಿಮಾನದ ಮಾತುಗಳು ಕೇಳಿಬಂದಂತೆ; ಮಠ, ಸ್ವಾಮಿಗಳೆಂದರೆ ಮೂಗು ಮುರಿಯುವ, ಹಗುರವಾಗಿ ಮಾತನಾಡುವ ವಾತಾವರಣವೂ ಇದೆ. ಇದಕ್ಕೆ ಕಾರಣ ತಮ್ಮ ಹೊಣೆಯರಿತು ತಮ್ಮ ಇತಿಮಿತಿಯೊಳಗೆ ಪ್ರಗತಿಪರ ಇಲ್ಲವೇ ಜನ ವಿರೋಧಿ ಕಾರ್ಯಗಳಲ್ಲಿ ಸ್ವಾಮಿಗಳಾದವರು ನಿರತರಾಗಿರುವುದು. ಜನಮನ್ನಣೆ ಪಡೆದು, ಜೀವನ ಪ್ರೀತಿಯೊಂದಿಗೆ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಏಳಿಗಾಗಿ ದುಡಿಯುತ್ತಿರುವ ಬೆರಳೆಣಿಕೆಯ ಮಠಾಧೀಶರಲ್ಲಿ ಸಿದ್ಧಗಂಗೆಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಎಲ್ಲ ವರ್ಗದ ಭಕ್ತಿ ಗೌರವಗಳಿಗೆ ಅರ್ಹರಾಗಿದ್ದಾರೆ. ಅವರನ್ನು ಕಂಡವರು, ಮಾತನಾಡಿದವರು ಎಂದೂ ಮರೆಯಲಾರದಂಥ ಭವ್ಯ ವ್ಯಕ್ತಿತ್ವ ಪೂಜ್ಯರದು.

*ಅನ್ನವನು ಇಕ್ಕುವುದು, ನನ್ನಿಯನು ನುಡಿಯುವುದು*
*ತನ್ನಂತೆ ಪರರ ಬಗೆವೊಡೆ ಕೈಲಾಸ*
*ಬಿನ್ನಾಣವಕ್ಕು ಸರ್ವಜ್ಞ*

ಕರ್ನಾಟಕದಲ್ಲಿರುವ ಬಹುತೇಕ ಮಠಗಳು ಸರ್ವಜ್ಞನ ಆಶಯದಂತೆ ನಡೆಯುತ್ತಿವೆ ಎಂದರೆ ಅತಿಶಯೋಕ್ತಿ ಏನಲ್ಲ. ಅನೇಕ ಮಠಗಳು ಅನ್ನ ದಾಸೋಹದ ಜೊತೆಗೆ ಜ್ಞಾನದಾಸೋಹವನ್ನು ಉಣಬಡಿಸುತ್ತ ಜನರ ಸಾಂಸ್ಕೃತಿಕ ಸಂಪತ್ತನ್ನು ಬೆಳೆಸಲು ನಿರಂತರವಾಗಿ ಪ್ರಯತ್ನಿಸುತ್ತಿವೆ. ಅದರಲ್ಲಿಯೂ ಲಿಂಗವಂತ ಮಠಾಧೀಶರಲ್ಲಿ ಕೆಲವರು 'ಜನಸೇವೆಯೇ ಜನಾರ್ದನ ಸೇವೆ', ಜನರ ನೋವಿನ ನಿವಾರಣೆಯೇ 'ಶಿವಪೂಜೆ' ಎಂದು ಭಾವಿಸಿ ಸೇವೆಯಲ್ಲಿಯೇ 'ಶಿವ'ನನ್ನು ಕಾಣುತ್ತಿದ್ದಾರೆ. ತಮ್ಮ ಸೇವೆಯ ಮೂಲಕ ಸಹಸ್ರ ಸಹಸ್ರ ಜನರ ಬಾಳಿಗೆ ಬೆಳಕು ಕರುಣಿಸುತ್ತಿದ್ದಾರೆ. ಮಠಗಳೇ ಇಲ್ಲದಿದ್ದಲ್ಲಿ ಗ್ರಾಮೀಣ ಪ್ರದೇಶದ ಬಹುತೇಕ ಬಡವರು ವಿದ್ಯೆಯಿಂದ ವಂಚಿತರಾಗಿ ಪಶುಗಳಂತೆ ಬಾಳಬೇಕಾಗಿತ್ತು. ಅವರಿವರ ಮಾತೇಕೆ? ಶ್ರೀ ತರಳಬಾಳು ಬೃಹನ್ಮಠದ ದೈಹಿಕವಾಗಿ ನಮ್ಮಿಂದ ಕಣ್ಮರೆಯಾಗಿರುವ ಪೂಜ್ಯ ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳವರ ಕೃಪಾಶೀರ್ವಾದ ದೊರೆಯದಿದ್ದರೆ ಇಂದು ನಾವು ಎಲ್ಲಿ ಹೇಗೆ ಬದುಕುತ್ತಿದ್ದೆವೆಂದು ಹೇಳಲಾಗದು. ಈ ದಿಸೆಯಲ್ಲಿ ಸಿದ್ಧಗಂಗೆಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಸಹ ತಮ್ಮ ಸುದೀರ್ಘ ಬದುಕಿನಲ್ಲಿ ಬಹು ಜನರಿಗೆ ಬೆಳಕು ನೀಡಿದ್ದಾರೆ. ದಾರಿ ತೋರಿದ್ದಾರೆ. ಕೈಹಿಡಿದು ಮುನ್ನಡೆಸಿದ್ದಾರೆ. ಈಗಲೂ ಆ ಕಾರ್ಯವನ್ನು ಗೌರವದಿಂದ ಮುಂದುವರಿಸಿದ್ದಾರೆ.

ಸಿದ್ಧಗಂಗಾ ಎನ್ನುತ್ತಲೇ ನಮ್ಮ ಕಣ್ಮುಂದೆ ನಿಲ್ಲುವ ಚಿತ್ರ ಕಾವಿಯ ನಿಲುವಂಗಿ ಧರಿಸಿರುವ, ತಲೆಗೆ ಕಾವಿಬಣ್ಣದ ಪೇಟ ಸುತ್ತಿರುವ ಹಣೆಯ ತುಂಬ ಎದ್ದು ಕಾಣುವಂತೆ ವಿಭೂತಿ ಹಚ್ಚಿರುವ, ಸದಾ ಕಣ್ಮುಚ್ಚಿ ಕುಳಿತಿರುವ, ಎತ್ತರದ ಆಳಾದರೂ ವಯೋಮಾನದಿಂದ ಬಾಗಿರುವ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರದು. ತಮ್ಮಲ್ಲಿಗೆ ಬಂದವರ ವಯಸ್ಸು, ಜಾತಿ, ಲಿಂಗ, ಅಧಿಕಾರ, ಅಂತಸ್ತು ನೋಡದೆ ಪ್ರೀತಿಯಿಂದ ಮಾತನಾಡಿಸುವ ತಾಯಿಯ ಹೃದಯ ಅವರದು. ಜನರ ಸಮಸ್ಯೆಗಳನ್ನು ಸಮಾಧಾನದಿಂದ ಕೇಳುವ, ಸಾಂತ್ವನದ ಮಾತನಾಡುವ, ಸಹಾಯ ಮಾಡುವ ಅವರ ಜೀವನ ವಿಧಾನವನ್ನು ಸಿದ್ಧಗಂಗಾ ಶ್ರೀಮಠದಲ್ಲಿ ಒಂದೆರಡು ಸಂದರ್ಭಗಳಲ್ಲಿ ಖುದ್ದಾಗಿ ಕಂಡಿದ್ದೇವೆ. ಎಂದೂ ಉದ್ವೇಗಕ್ಕೆ ಒಳಗಾಗದೆ ಶಾಂತಚಿತ್ತರಾಗಿ ಗ್ರಾಮೀಣ ಜನರ ಬದುಕಿಗೆ ಸ್ಪಂದಿಸುವ ಪೂಜ್ಯರು ಸರ್ವಮತೀಯರ ಭಕ್ತಿ ಪ್ರೀತಿ, ಗೌರವಗಳಿಗೆ ಪಾತ್ರರಾಗಿದ್ದಾರೆ. ಇದಕೆ ಇತ್ತೀಚೆಗೆ ನಡೆದ ಅವರ ಪಟ್ಟಾಧಿಕಾರದ ವಜ್ರ ಮಹೋತ್ಸವವೇ ಸಾಕ್ಷಿಯಾಗಿದೆ.

### ಜ್ಞಾನದಾಸೋಹ

ಲೋಕಕಲ್ಯಾಣವೇ ಆತ್ಮಕಲ್ಯಾಣಕ್ಕೆ ದಾರಿ ಎಂದು ಭಾವಿಸಿರುವ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಸೇವಾವಧಿಯಲ್ಲಿ ಗಮನಾರ್ಹವಾದ ಅದ್ಭುತ ಕೆಲಸಕಾರ್ಯಗಳನ್ನು ಮಾಡಿದ್ದಾರೆ. ಅವುಗಳಲ್ಲಿ ಬಹು ಮುಖ್ಯವಾದವು ಅನ್ನದಾಸೋಹ ಮತ್ತು ಜ್ಞಾನದಾಸೋಹ. ಸರ್ವ

ಅನರ್ಥಗಳಿಗೆ ಅಜ್ಞಾನವೇ ಮೂಲವೆಂದು ತಿಳಿದಿರುವ ಶ್ರೀಗಳವರು 'ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯ್ಯ' ಎಂಬಂತೆ ಜ್ಞಾನಾಂಜನ ಶಲಾಕೆಯನ್ನು ತಮ್ಮ ಕೈಯಲ್ಲಿ ಹಿಡಿದು ಜನರ ಅಜ್ಞಾನಾಂಧಕಾರವನ್ನು ಕಳೆಯುತ್ತಾ ಬಂದಿದ್ದಾರೆ. ಅದಕ್ಕಾಗಿ ಶಿಶುವಿಹಾರದಿಂದ ಸ್ನಾತಕೋತ್ತರ ಪದವಿಯವರೆಗೆ ನೂರಾರು ಶಿಕ್ಷಣ ಸಂಸ್ಥೆಗಳನ್ನು ತೆರೆದು ಶಿಕ್ಷಣವನ್ನು ನೀಡುತ್ತಿದ್ದಾರೆ. ಶ್ರೀ ಸಂಸ್ಥೆಯ ಆಶ್ರಯದಲ್ಲಿ ಶಿಕ್ಷಣ ಪಡೆದ ಹಲವಾರು ದೇಶ ವಿದೇಶಗಳಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಸಿದ್ಧಗಂಗಾ ಶ್ರೀಗಳವರ ಶಿಕ್ಷಣ ಸಂಸ್ಥೆಗಳಲ್ಲಿದ್ದು ತಮ್ಮ ಬಾಳಿಗೆ ಬೆಳಕು ಪಡೆದಿರುವ ಜನರು ಎಲ್ಲೇ ಇದ್ದರೂ ಪೂಜ್ಯ ಸ್ವಾಮೀಜಿಯವರನ್ನು ಆಗಾಗ ಭಕ್ತಿ ಗೌರವಗಳಿಂದ ಸ್ಮರಿಸಿಕೊಳ್ಳುವುದನ್ನು ಗಮನಿಸಿದ್ದೇವೆ.

### *ಅನ್ನದಾಸೋಹ*

ಜ್ಞಾನದಾಸೋಹದ ಜೊತೆಯಲ್ಲಿ ಅನ್ನದಾಸೋಹವನ್ನು ನೀಡುತ್ತಿರುವುದರಿಂದ ಅಸಂಖ್ಯಾತ ಗ್ರಾಮೀಣ ಬಡವರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಲು ಸಾಧ್ಯವಾಗಿದೆ. ಸ್ವಾಮಿಜೀಯವರು ಸಹ ಆ ಮಕ್ಕಳನ್ನು ಮಾತನಾಡಿಸುವಾಗ ಮಮತೆಯ ಮಹಾಪೂರ ಹರಿಸುವುದನ್ನು ಖುದ್ದಾಗಿ ಕಾಣುವ ಅವಕಾಶ ನಮಗೆ ಲಭಿಸಿತ್ತು. ಒಮ್ಮೆ ಅನಿರೀಕ್ಷಿತವಾಗಿ ಸಿದ್ಧಗಂಗಾ ಶ್ರೀಮಠಕ್ಕೆ ಭೇಟಿಯಿತ್ತಾಗ ಪೂಜ್ಯರ ಸುತ್ತ ಸುಮಾರು ವಿದ್ಯಾರ್ಥಿಗಳಿದ್ದರು. ಅವರು ತಮ್ಮ ತಂದೆ-ತಾಯಿಯ ಹತ್ತಿರ ಸಲುಗೆಯಿಂದ ಮಾತನಾಡುವಂತೆ ಪೂಜ್ಯರೊಂದಿಗೆ ಮಾತನಾಡುತ್ತಿದ್ದರು. ವಿದ್ಯಾರ್ಥಿಗಳು ಒಬ್ಬೊಬ್ಬರೇ ಮುಂದೆ ಬಂದು ತಮ್ಮ ತೊಂದರೆಗಳನ್ನು ಹೇಳಿಕೊಂಡಾಗ ಸ್ವಾಮೀಜಿಯವರು ಹಸನ್ಮುಖಿಗಳಾಗಿ ಆ ವಿದ್ಯಾರ್ಥಿಗಳ ಸಮಸ್ಯೆಗಳನ್ನು ತಾಳ್ಮೆಯಿಂದ ಕೇಳುತ್ತಿದ್ದರು. ಸೂಕ್ತ ಪರಿಹಾರ ನೀಡುತ್ತಿದ್ದರು. ಚೆನ್ನಾಗಿ ಓದುವಂತೆ ಆಶೀರ್ವದಿಸುತ್ತಿದ್ದರು. ಅವರ ತಾಯ್ತನ ಕಂಡು ನಮಗೆ ಹೃದಯ ತುಂಬಿ ಬರುತ್ತಿತ್ತು. ತಮ್ಮ ಸ್ಥಾನಮಾನಗಳ ಹಮ್ಮುಬಿಮ್ಮುಗಳನ್ನು ತೋರದೆ ವಿದ್ಯಾರ್ಥಿಗಳೊಂದಿಗೆ ಸರಳವಾಗಿ ಬೆರೆಯುವ, ಆತ್ಮೀಯತೆಯಿಂದ ಅವರ ವಿಚಾರಗಳನ್ನು ಕೇಳಿ ಸಮಾಧಾನ ಮಾಡುವ, ಸರ್ವರನ್ನು ಸಮಾನವಾಗಿ ಕಾಣುವ ಶ್ರೀಗಳವರ ಜೀವನ ವಿಧಾನ ಅನುಕರಣೀಯವಾದುದಾಗಿದೆ.

### *ಬಸವ ಸಂದೇಶ*

ಪೂಜ್ಯರು ಬಸವಸಂದೇಶದ ಸಾಕಾರಮೂರ್ತಿಗಳಾಗಿದ್ದಾರೆ. ಕಾಯಕ, ದಾಸೋಹ, ಪೂಜೆಯಲ್ಲಿ ಸಾರ್ಥಕತೆಯನ್ನು ಕಂಡುಕೊಂಡಿದ್ದಾರೆ. ಅರ್ಹರಿಗೆ ಸೂಕ್ತ ಸಂದರ್ಭದಲ್ಲಿ ಸಮಾಜಸೇವಾದೀಕ್ಷೆ ಲಭ್ಯವಾದರೆ ಅವರು ಹೇಗೆ ಸಾಮಾಜಿಕ ಒಳಿತನ್ನು ಸಾಧಿಸಬಲ್ಲರೆಂಬುದಕ್ಕೆ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಜೀವಂತ ನಿದರ್ಶನವಾಗಿದ್ದಾರೆ. ವಿವಿಧ ಕ್ಷೇತ್ರಗಳಲ್ಲಿರುವ ಮುಖಂಡರು ಜನರು ಬಯಸುವುದನ್ನು ಕೊಡದೆ ಆ ಜನರ ಪ್ರಗತಿಗೆ ಅಗತ್ಯವಾಗಿ ಏನು ಬೇಕು ಎಂದು ಚಿಂತಿಸಿ ಅಂಥದನ್ನು ಮಾತ್ರ ಕೊಡುವ ಮನಸ್ಸುಳ್ಳವರಾಗಿರಬೇಕು. ಈ ದಿಕ್ಕಿನಲ್ಲಿ ಯೋಚಿಸಿ ಜನರ ಉನ್ನತಿಗೆ ಬೇಕಾದುದನ್ನು ಮಾತ್ರ ಕೊಡುತ್ತ ಬಂದಿದ್ದಾರೆ. ಹಾಗಾಗಿಯೇ ಜನರು ತಮ್ಮ ತನು-ಮನ-ಧನವನ್ನು ಸಂಸ್ಥೆಯ ಬೆಳವಣಿಗೆಗೆ ಶ್ರದ್ಧೆಯಿಂದ ಸವೆಸುತ್ತಲಿದ್ದಾರೆ. ನಮ್ಮಲ್ಲಿರುವ ಎಲ್ಲಾ ಮಠಗಳಲ್ಲಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಂಥವರು ಇದ್ದರೆ ಆ ಭಾಗದ ಜನರ ಉದ್ಧಾರ ತನ್ನಿಂದ ತಾನೇ ಆಗುತ್ತದೆ. ಅವಿರತವಾಗಿ ಸಮಾಜದ ವಿವಿಧ ಕಾರ್ಯಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವ ಸ್ವಾಮೀಜಿಯವರು ಶ್ರೀಗಂಧದಂತೆ ತೇದುಕೊಂಡು ಪರಿಮಳ ಬೀರುತ್ತ ಜನತೆಗೆ ತಂಪನ್ನೀಯುತ್ತಿದ್ದಾರೆ. ಕೂಡಲ ಸಂಗನನ್ನು ಒಲಿಸಲು ಬಂದಿರುವ ಪ್ರಸಾದ ಕಾಯವನ್ನು ಕಾಯಕದಲ್ಲಿ ಸವೆಸಿ ಕಾಯಕಯೋಗಿಗಳೆನಿಸಿದ್ದಾರೆ.

### *ಮಾನವೀಯ ಅಂತಃಕರಣ*

ಇಂದು ನಾವೆಲ್ಲರೂ ಒಂದು ರೀತಿಯ ಪರ್ವಕಾಲದಲ್ಲಿದ್ದೇವೆ. ಎಲ್ಲೆಡೆ ಗೊಂದಲ, ಕೋಲಾಹಲ, ಸ್ವಜನ ಪಕ್ಷಪಾತ, ಸುಲಿಗೆ, ನಿರುದ್ಯೋಗ ಸಮಸ್ಯೆ, ಬಡತನ, ಅಜ್ಞಾನ, ಮೂಢನಂಬಿಕೆ ಮುಂತಾದವುಗಳನ್ನು ಕಾಣುತ್ತಿದ್ದೇವೆ. ಹೀಗಾಗಿ ಮೌಲ್ಯಗಳು, ಆದರ್ಶಗಳು ಮಣ್ಣುಪಾಲಾಗುತ್ತಿವೆ. ಮನುಷ್ಯ ಮಾನಸಿಕ ನೆಮ್ಮದಿಯನ್ನು ಕಳೆದುಕೊಂಡು ಒಂದು ರೀತಿಯ ಭಯದ ವಾತಾವರಣದಲ್ಲಿಯೇ ಬದುಕುವ ಸನ್ನಿವೇಶಗಳಿವೆ. ಅಪನಂಬಿಕೆ, ಅನುಮಾನ, ಅಹಂಕಾರ, ಸ್ವಾರ್ಥ, ಕೀರ್ತಿಪ್ರತಿಷ್ಠೆ ಶನಿಗಳು ಯಾರನ್ನೂ ಬಿಡುತ್ತಿಲ್ಲ. ಇಂಥ ವಿಷಮ ಪರಿಸ್ಥಿತಿಯಲ್ಲಿ ಶಾಂತಿಯ ಧಾಮಗಳಾಗಿ ಜನರ ಬದುಕಿಗೆ ಬೆಳಕು ತೋರಬೇಕಾಗಿದ್ದ ಮಠಗಳು, ಮಠಾಧೀಶರು ಕಣ್ಮರೆಯಾಗುತ್ತಿದ್ದಾರೆ. ಆದಾಗ್ಯೂ ಅಲ್ಲಲ್ಲಿ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಂಥ ಹಿರಿಯ ಪುಣ್ಯಜೀವಿಗಳು ನಮ್ಮ ಕಣ್ಮುಂದಿರುವುದು ಆಶಾದಾಯಕವಾಗಿದೆ. ಅವರ ಕಾಯಕ ಶ್ರದ್ಧೆ ಸಾಮಾಜಿಕ ಕಳಕಳಿ, ಜನಪರ ನಿಲುವು, ಮಾನವೀಯ ಅಂತಃಕರಣ ಸಮಾಜದ ವಿವಿಧ ನೇತಾರರಿಗೆ, ಮಠಾಧೀಶರಿಗೆ ಬಂದಲ್ಲಿ ಈ ಲೋಕದಲ್ಲಿ ನಿಜವಾದ ಶಾಂತಿ ನೆಮ್ಮದಿ ಲಭಿಸಬಲ್ಲುದು. ೯೫ ವಸಂತಗಳನ್ನು ಸಾರ್ಥಕವಾಗಿ ಕಳೆದಿರುವ ಶ್ರೀಗಳರ ದೇಹ ದಣಿದಿದೆ; ಹಣ್ಣಾಗಿದೆ. ಆದರೆ ಅವರ ಮನೋಬಲ ಕುಗ್ಗಿಲ್ಲ; ಉತ್ಸಾಹ ತಗ್ಗಿಲ್ಲ; ಕ್ರಿಯಾಶೀಲತೆ ಕಡಿಮೆ ಆಗಿಲ್ಲ. ಇಂಥ ದಿವ್ಯ ಹಿರಿಯ ಚೇತನ ಇನ್ನೂ ಹಲವಾರು ಕಾಲ ನಮ್ಮ ಮಧ್ಯದಲ್ಲಿದ್ದು ಸಮಾಜಕ್ಕೆ ದಿಕ್ಕು ತೋರಿಸುವಂತಾಗಲಿ ಎಂದು ಆಶಿಸುತ್ತೇವೆ.

*(ಕೃಪೆ : ತೊಂಬತ್ತರ ತಪಸ್ವಿ)*





# ವೀರಶೈವ ಸಾಹಿತ್ಯದಲ್ಲಿ ಪ್ರಸಾದದ ಪರಿಕಲ್ಪನೆ

– ಡಾ || ಸಿ. ನಾಗಭೂಷಣ
ಪ್ರವಾಚಕರು
ಕನ್ನಡ ಅಧ್ಯಯನ ವಿಭಾಗ
ಸ್ನಾತಕೋತ್ತರ ಕೇಂದ್ರ, ರಾಯಚೂರು.

ಕಳೆದ ಸಂಚಿಕೆಯಿಂದ

**ಪ್ರಸಾದದ ಅರ್ಥ :** ಪ್ರಸಾದ ಶಬ್ದವು ವಚನಕಾರರಿಗಿಂತ ಪೂರ್ವದಲ್ಲಿಯೇ ಸಾಕಷ್ಟು ಪ್ರಚಲಿತದಲ್ಲಿತ್ತು. ಶೈವ ಸಂಹಿತೆಯಲ್ಲಿ, ವ್ಯಾಸ-ಜೈಮಿನಿ ಸಂವಾದದಲ್ಲಿ, ಜಾಬಾಲ, ಮನು ಮುಂತಾದ ಋಷಿಗಳ ಹೇಳಿಕೆಗಳಲ್ಲಿ, ಮಹಾಭಾರತದ ಅನುಶಾಸನ ಪರ್ವದಲ್ಲಿ, ಕೂರ್ಮ, ಪದ್ಮ, ಶಿವ ಮುಂತಾದ ಪುರಾಣಗಳಲ್ಲಿ, ಮುಂಡಕೋಪನಿಷತ್ತಿನಲ್ಲಿ ಪ್ರಸಾದದ ಮಹಿಮೆಯನ್ನು ಹೇಳಲಾಗಿದ್ದರೂ 'ಪ್ರಸಾದದ' ಪರಿಕಲ್ಪನೆ ವಚನಕಾರರಲ್ಲಿ ಮೂಲದಕ್ಕಿಂತ ತೀರ ಭಿನ್ನವಾದ ಹಾಗೂ ವೈಶಿಷ್ಟ್ಯಪೂರ್ಣ ಮೌಲ್ಯವಾಗಿ ರೂಪುಗೊಂಡಿದೆ.

ಪ್ರಸಾದ ಪದವು ಕೃಪೆ ಅಥವಾ ಅನುಗ್ರಹ ಎಂಬರ್ಥ ಕೊಡುವ ಒಂದು ಸಂಸ್ಕೃತ ಶಬ್ದ. ಪ್ರಸಾದವನ್ನು ಕೃಪೆತೋರಿ ಅನುಗ್ರಹಿಸಲ್ಪಡುವ ವಸ್ತು ಎಂದು ಹೇಳಬಹುದು. ವೀರಶೈವ ಮತದಲ್ಲಿ ಗುರುವು ಶಿಷ್ಯನ ಮೇಲಿನ ತನ್ನ ಅನುಗ್ರಹ ಅಥವಾ ಕೃಪೆಯ ಕುರುಹಾಗಿ ಶಿಷ್ಯನಿಗೆ ಕೊಡುವ ವಸ್ತುವನ್ನು ಪ್ರಸಾದವೆಂದು ಕರೆಯುವುದು ರೂಢಿಯಲ್ಲಿದೆ. ಸಾಮಾನ್ಯವಾಗಿ ಪ್ರಸಾದವು ಆಹಾರ ಪದಾರ್ಥ ಇಲ್ಲವೇ ಹಣ್ಣು ಹಂಪಲುಗಳ ರೂಪದಲ್ಲಿರುತ್ತದೆ. ಭಕ್ತನು ಗುರುವಿಗೆ ಸದ್ಭಕ್ತಿಯಿಂದ ಅರ್ಪಿಸಿದ ಆಹಾರವನ್ನು ಗುರುವು ಸ್ಪರ್ಶಮಾತ್ರದಿಂದ ಪವಿತ್ರೀಕರಿಸಿ . ಪುನಃ ಅದನ್ನು ಭಕ್ತನಿಗೆ ಕೊಡುತ್ತಾನೆ. ಅದುವೇ ಪ್ರಸಾದ ಪದಾರ್ಥವು ವಿಶಿಷ್ಟ ಸಂಸ್ಕಾರದಿಂದ ಪ್ರಸಾದವಾಗುತ್ತದೆ. ದ್ರವ್ಯ ಪದಾರ್ಥಗಳೆಲ್ಲ ಪ್ರಸನ್ನತ್ವದಿಂದ ಬಂಧುವಾಗಿ ಪ್ರಸಾದವಾಗುತ್ತದೆ. ಹೀಗಾಗಿ ಪ್ರಸಾದವನ್ನು ೧. ಅನುಗ್ರಹ, ೨. ಅನುಗ್ರಹಿಸಿಕೊಟ್ಟ ಪಡಿ ಪದಾರ್ಥ ಎಂದು ಅರ್ಥೈಸಬಹುದು.

ಪ್ರಸಾದವನ್ನ ಕುರಿತು ಸಿದ್ಧಾಂತ ಶಿಖಾಮಣಿಯಲ್ಲಿ.

೧. *ಮನಃ ಪ್ರಸಾದ ಯೋಗೇನ ಪ್ರಾಸಾದೀತ್ಸೇಪ ಕಥ್ಯತೆ ನೈರ್ಮಲ್ಯಂ ಮನಸೋ ಲಿಂಗಂ ಪ್ರಸಾದ ಇತಿಕಥ್ಯತೆ* ಎಂದೂ

೨. *'ಶಿವ ಪ್ರಸಾದೋಯದ್ದ್ರವ್ಯಂ ಶಿವಾಯ ವಿನಿವೇದಿತಂ ನೈರ್ಮಲ್ಯಂ ತತ್ತು ಶೈವಾನಾಂ ಮನೋ ನೈರ್ಮಲ್ಯಂ ಕಾರಣಂ'* ಎಂದಿದೆ.

ಮೊದಲ ಹೇಳಿಕೆಯಲ್ಲಿ ಮನಸ್ಸಿನ ನಿರ್ಮಲತ್ವದ ಚಿನ್ಹೆಯೇ ಪ್ರಸಾದ ಎಂಬ ಅರ್ಥ ಇದ್ದರೆ, ಎರಡನೇ ಸೂಕ್ತಿಯಲ್ಲಿ ಯಾವ ವಸ್ತು ಶಿವನಿಗೆ ಸಮರ್ಪಿತವಾಗುವುದೋ ಅದು ಪ್ರಸಾದ. ಆ ಶಿವ ಪ್ರಸಾದವು ಮನೋನೈರ್ಮಲ್ಯಕ್ಕೆ ಕಾರಣವಾಗುತ್ತದೆ ಎಂಬ ಅರ್ಥ ಧ್ವನಿತವಾಗಿದೆ. ಪ್ರಸಾದವನ್ನು ಕುರಿತ ಮನಸ್ಸಿನ ನೈರ್ಮಲ್ಯ ಎನ್ನುವ ಅರ್ಥ ಆಂತರಿಕ ಅರ್ಥದಿಂದ ಕೂಡಿದ್ದರೆ ಶಿವನಿಗೆ ಅರ್ಪಿಸಿದ ಪ್ರಸಾದ ಎನ್ನುವ ಅರ್ಥ ಬಹಿರಂಗದ ಆಚರಣೆಯ ದ್ಯೋತಕವಾಗಿದೆ. ಬಾಹ್ಯ ಪ್ರಸಾದದ ಸ್ವೀಕಾರದಿಂದ ಮನಸ್ಸಿನ ಪ್ರಸನ್ನತೆ ಉಂಟಾಗುತ್ತದೆ. ಆದ್ದರಿಂದ ಬಾಹ್ಯ ಪದಾರ್ಥಗಳನ್ನು ಕೇವಲ ಪದಾರ್ಥಗಳನ್ನಾಗಿ ಸ್ವೀಕರಿಸಿದರೆ ಗುರುಲಿಂಗ ಜಂಗಮಕ್ಕೆ ಅವುಗಳನ್ನು ಅರ್ಪಿಸಿ ಪ್ರಸಾದವನ್ನಾಗಿ ಪರಿವರ್ತಿಸಿ ಅದರಿಂದ ಪ್ರಸನ್ನತೆಯನ್ನು ಪಡೆಯಬೇಕು. ಶಿವನು ಗುರುಲಿಂಗ ಜಂಗಮ ರೂಪನಾದ ತನ್ನನ್ನು ಪೂಜಿಸುವ ವೀರಶೈವರಿಗೆ ದಯೆಯಿಂದ ಅನುಗ್ರಹಿಸುವ ಫಲಗಳಲ್ಲಿ ಪ್ರಸಾದವೂ ಒಂದಾಗಿದೆ.

ಪ್ರಸಾದ ಪದದ ವ್ಯುತ್ಪತ್ತಿಯ ಬಗೆಗೆ ಮಗ್ಗೆಯ ಮಾಯಿದೇವರು ಈ ರೀತಿ ಹೇಳಿದ್ದಾರೆ.

**ಪ್ರಕಾರೋಯಂ ಪ್ರಸಾದಃ ಸ್ಸಾತ್ಸಾಕಾರೋ ಭಕ್ತಿರುಚ್ಯತೇ**
**ಪ್ರಸಾದ ಪೂರ್ವಿತಾ ಭುಕ್ತಿರ್ಮುಕ್ತಿ ದೇತಿ ದಕಾರತಃ**

ಪ್ರಸಾದ ಪದದಲ್ಲಿರುವ ಮೂರಕ್ಷರಗಳಲ್ಲಿ ಮೊದಲಿನದಾದ 'ಪ್ರ' ಅಕ್ಷರವು ಪ್ರಸಾದವನ್ನು 'ಸಾ' ಅಕ್ಷರವು ಭಕ್ತಿಯನ್ನು, 'ದ' ಅಕ್ಷರವು ಪ್ರಸಾದ ಪೂರ್ವಕವಾದ ಭಕ್ತಿಯು ಮುಕ್ತಿ ಪ್ರದವೆಂಬುದನ್ನು ಸೂಚಿಸುತ್ತದೆ.

ಪ್ರಸಾದದ ತಳಹದಿ ಅರ್ಪಣತ್ವ. ಈ ಅರ್ಪಣತ್ವವನ್ನು ಬಹು ವ್ಯಾಪಕವಾದ ಅರ್ಥದಲ್ಲಿ ವಚನಕಾರರು ಪ್ರತಿಪಾದಿಸಿದ್ದಾರೆ. ಅಹಂಕಾರದ ಅಳಿವಿಗೆ ಅರ್ಪಣತ್ವ ಪ್ರಮುಖ ಸಾಧನವಾಗಿದೆ. ತನ್ನದೆಂಬುದು ಏನನ್ನೂ ಉಳಿಸಿಕೊಳ್ಳದೆ ಎಲ್ಲವನ್ನು ಶಿವನಿಗೆ ಅರ್ಪಿಸಬೇಕು. ಆಗ ಅದು ಬಂಧನಕ್ಕೆ ಕಾರಣವಾಗದೆ ಪ್ರಸಾದಕ್ಕೆ ಕಾರಣವಾಗುತ್ತದೆ. ಅರ್ಪಿತದಲ್ಲಿ ಕ್ರಿಯಾರ್ಪಣೆ ಮತ್ತು ಜ್ಞಾನಾರ್ಪಣೆ ಎಂಬ ಎರಡು ವಿಧಗಳುಂಟು. ೧. ಇಷ್ಟ, ಭಾವ, ಪ್ರಾಣ ಸ್ವರೂಪನಾದ ಗುರು, ಲಿಂಗ ಜಂಗಮರಿಗೆ ಅರ್ಪಿಸಿ ಆ ಪ್ರಸಾದವನ್ನು ಸ್ವೀಕರಿಸುವುದು ಕ್ರಿಯಾರ್ಪಣೆ. ೨. ಎಲ್ಲಾ ಇಂದ್ರಿಯಗಳನ್ನು ಲಿಂಗ ಸ್ವರೂಪವನ್ನಾಗಿ ಮಾಡಿಕೊಂಡು ಏನನ್ನೂ ಸ್ವೀಕರಿಸಿದರೂ ಅದು ಸಹಜವಾಗಿ ಪ್ರಸಾದವಾಗಿ ರೂಪಿಸಿಗೊಳ್ಳುವುದು ಜ್ಞಾನಾರ್ಪಣೆ. ಈ ರೀತಿ ಪ್ರಸಾದದಲ್ಲಿ ಕಂಡುಬರುವ ಕ್ರಿಯಾ ಪ್ರಧಾನವಾದ ಆಚರಣೆಯನ್ನು ಸಹಜ ಆಚರಣೆ ಎಂದೂ ಜ್ಞಾನ ಪ್ರಧಾನವಾದ ಆಚರಣೆಯನ್ನು ಸಂಬಂಧದ ಆಚರಣೆ

ಯೆಂದು ಕರೆಯುತ್ತಾರೆ. ಪ್ರಸಾದವನ್ನು ಕುರಿತು ಮಾತನಾಡುವಾಗ ಜೊತೆಗೆ 'ದಾಸೋಹ' ಪದ ಅಷ್ಟಾವರಣಗಳ ಹಿನ್ನೆಲೆಯಲ್ಲಿ ವಿಶಾಲ ಅರ್ಥವನ್ನು ಪಡೆದಿದೆ. ಶರಣ ಭಕ್ತಿ ಸಾಧನೆಯಲ್ಲಿ ದಾಸೋಹಕ್ಕೆ ಬಹಳ ಮಹತ್ವದ ಸ್ಥಾನ ಇದೆ. ಕಾಯಕದಿಂದ ಅರ್ಜಿಸಿದ ಪದಾರ್ಥಗಳನ್ನು ನಾನು ಕೊಡುತ್ತಿದ್ದೇನೆ ಎನ್ನುವ ಅಹಂಮಿಕೆಯನ್ನು ತ್ಯಜಿಸಿ ಸಮರ್ಪಣ ಭಾವದಿಂದ ದಾನಮಾಡುವುದೇ ದಾಸೋಹ. ಇದರಲ್ಲಿ ವ್ಯಕ್ತಿ ಮತ್ತು ಸಮಾಜಗಳೆರಡರ ಹಿತಸಾಧನೆಯ ಪೂರ್ಣ ದೃಷ್ಟಿಯನ್ನು ಕಾಣಬಹುದು. ದಾಸೋಹ ಪ್ರಕ್ರಿಕೆಯಲ್ಲಿ ತಾನು ದುಡಿದುದನ್ನು ಇತರರಿಗೆ ಹಂಚಿ ಆನಂದ ಪಡುವುದು. ಅನ್ಯರು ಸ್ವೀಕರಿಸಿದರೆಂಬುದರಿಂದ ತಾನು ಧನ್ಯನಾದನೆಂಬ ಭಾವ ಮೂಡುತ್ತದೆ. ದಾಸೋಹವು ಸಮಾನ ಹಂಚಿಕೆಯ ಸಮತಾ ಭಾವದ ವೀರಶೈವ ತಾತ್ವಿಕ ತಳಹದಿಯುಳ್ಳ ಪೂಜಾ ಪಾದಿತ್ಸೋಪಾದಿಯ ಸಮೂಹ ಸಂಕೀರ್ಣ ಕ್ರಿಯೆಯಾಗಿದೆ. ದಾಸೋಹವು ಸಾಮಾಜಿಕ ಸ್ವಾಸ್ಥ, ಆರ್ಥಿಕ ಸಮಾನತೆ, ಮಾನಸಿಕ ನೆಮ್ಮದಿಯನ್ನು ತಂದುಕೊಡುವಲ್ಲಿ ಫಲಕಾರಿಯಾಗಿದೆ. ಹೀಗಾಗಿ ಹೇಮದ ಆಸೆಯಿಂದಲ್ಲದೆ ನೇಮದ ಕೂಲಿಯ ನಿಷ್ಠೆಯಿಂದ ಕೆಲಸ ಮಾಡಬೇಕು. ಬಂದುದನ್ನು ತನಗಾಗಿ ಅಲ್ಲದೆ ದಾಸೋಹಕ್ಕಾಗಿ ವಿನಿಯೋಗಿಸಬೇಕು. ತನುಮನವ ಬಳಲಿಸಿ ತಂದು ದಾಸೋಹವ ಮಾಡಬೇಕು. ದೇಹ ಶ್ರಮದಿಂದ ದುಡಿಯದೆ ಬಂದುದು ದೇವನಿಗೆ ಅರ್ಪಿತವಾಗದು. ಆದರೂ ಕಾಯಕದಿಂದ ಬಂದದ್ದು ಮಾತ್ರ ದೇವರಿಗೆ ಅರ್ಪಿತವಾಗುತ್ತದೆ. ದಾಸೋಹಕ್ಕೆ ಯೋಗ್ಯವಾಗುತ್ತದೆ.

*ಮನದ ಮತ್ಸರವ ಕಳೆದು ಮನದ ಮೇಲೆ ಲಿಂಗವ ಕುಳ್ಳಿರಿಸ ಬೇಕಯ್ಯಾ*
*ಧನಲೋಭವ ಕಳೆದು ಧನದ ಮೇಲೆ ಜಂಗಮವ ಕುಳ್ಳಿರಿಸ ಬೇಕಯ್ಯಾ*
*ತನುಗುಣಂಗಳು ಕಳೆದು ಪ್ರಸಾದ ಕಾಯವ ಮಾಡಬೇಕಯ್ಯಾ*
*ಇಂತೀ ತ್ರಿವಿಧ ಗುಣಂಗಳ ಕಳೆದು ತ್ರಿವಿಧದಲ್ಲಿ ದಾಸೋಹಿಯಾಗಿರಬೇಕು.*

ಎಂಬ ವಚನದಲ್ಲಿ ಚನ್ನಬಸವಣ್ಣನವರು ತ್ರಿವಿಧ ದಾಸೋಹದಿಂದ ನಿರಹಂಕಾರವನ್ನು ಸಾಧಿಸುವ ಬಗೆಯನ್ನು ಕುರಿತು ಹೇಳಿದ್ದಾರೆ. ಗುರು, ಲಿಂಗ, ಜಂಗಮಕ್ಕೆ ತನು, ಮನ, ಧನಗಳನ್ನು ಅರ್ಪಿಸಬೇಕು ಎಂಬ ತ್ರಿವಿಧ ದಾಸೋಹದ ಅಂಶವನ್ನು ಒತ್ತಿ ಹೇಳಿದ್ದಾರೆ. ಜಂಗಮಕ್ಕೆ ಧನವನ್ನು ಅರ್ಪಿಸಬೇಕು ಎಂಬ ಹೇಳಿಕೆಯಲ್ಲಿ ಕಾಯಕದಿಂದ ಬಂದ ಧನವನ್ನು ಜಂಗಮ ರೂಪಿಯಾದ ಜಗತ್ತಿನ ಉದ್ಧಾರಕ್ಕೆ ವಿನಿಯೋಗಿಸಬೇಕು ಎಂಬುದು ಮಹತ್ತರವಾದುದು. ದಾಸೋಹದ ಸಂದರ್ಭದಲ್ಲಿ ಮೇಲು ಕೀಳಿನ ಪ್ರಸಂಗ ಉದ್ಭವವಾಗುವುದಿಲ್ಲ. ಕಾಯಕದಿಂದ ಬಂದುದನ್ನು ಹೇಗೆ ಸದ್ವಿನಿಯೋಗ ಮಾಡಬೇಕೆಂಬುದನ್ನು ದಾಸೋಹ ತತ್ವದಲ್ಲಿ ಅಳವಡಿಸಲಾಗಿದೆ. ಭಕ್ತನು ತನ್ನ ಆಹಾರವನ್ನು ತನ್ನದು ಎಂದು ಭಾವಿಸದೆ ಭಗವಂತನದೆಂದು ಭಾವಿಸಿ ಗುರುಲಿಂಗ ಜಂಗಮರಿಗೆ ಅರ್ಪಿಸಿ ಅನಂತರ ದಾಸೋಹ ಭಾವದಿಂದ ಉಪಭೋಗಿಸುವ ಆಹಾರವು ಪ್ರಸಾದವೆನಿಸುತ್ತದೆ. ಮೋಕ್ಷಪ್ರಾಪ್ತಿಗೆ ಯಜ್ಞ ಯಾಗಾದಿಗಳನ್ನು ಮಾಡಬೇಕಿಲ್ಲ. ದಾಸೋಹ ಒಂದೇ ಸಾಕು. ಶರಣ ಧರ್ಮದ ಸಾರ ಸರ್ವಸ್ವವನ್ನು ಮನ, ಮೈಗೂಡಿಸಿಕೊಂಡು ನಿತ್ಯಜೀವನದಲ್ಲಿ ಅಳವಡಿಸಿಕೊಂಡಿರುವ ಸಿದ್ಧಗಂಗಾಮಠದ ಪೂಜ್ಯಶ್ರೀಗಳಲ್ಲಿ ಕಾಯಕ, ದಾಸೋಹ ಮತ್ತು ಪ್ರಸಾದ ತತ್ವಗಳೆಲ್ಲವೂ ಏಕೀಭವಿಸಿ ನೆಲೆಗೊಂಡಿವೆ. ಹನ್ನೆರಡನೇ ಶತಮಾನದ ಬಸವಾದಿ ಪ್ರಮಥರ ಭಕ್ತಿ, ಸತ್ಯ ಶುದ್ಧ ಕಾಯಕ, ಲಿಂಗ ಪೂಜಾನುಷ್ಠಾನ, ದಾಸೋಹ, ಪ್ರಸಾದ ತತ್ವಗಳು ಇಂದಿಗೂ ಶ್ರೀಗಳ ಮೂಲಕ ಅನುರಣಿತವಾಗಿರುವುದು ಎಲ್ಲರೂ ತಿಳಿದಿರುವ ಸಂಗತಿಯೇ ಆಗಿದೆ. ಶರಣಧರ್ಮದ ಸಾಕಾರಮೂರ್ತಿ, ದಾಸೋಹ ತಪಸ್ವಿಯಾಗಿದ್ದಾರೆ.

## ಪ್ರಸಾದದ ಮಹಿಮೆ

ಪ್ರಸಾದದ ಮಹತ್ವವನ್ನು ಉರಿಲಿಂಗ ಪೆದ್ದಿಗಳು ತನ್ನ ವಚನದಲ್ಲಿ ಅರ್ಥಗರ್ಭಿತವಾಗಿ ನುಡಿದಿದ್ದಾರೆ.

*ಗುರುಪ್ರಸಾದ ಲಿಂಗಕ್ಕೆ ಸೋಂಕಿದಲ್ಲಿ ಸರ್ವಾಂಗವು*
*ಗುರುವಪ್ಪುದು ತಪ್ಪದಯ್ಯಾ*
*ಲಿಂಗ ಪ್ರಸಾದ ಮನಕ್ಕೆ ಸೋಂಕಿದಲ್ಲಿ ಮನವೆಲ್ಲ*
*ಲಿಂಗವಪ್ಪುದು ತಪ್ಪದಯ್ಯಾ*
*ಜಂಗಮ ಪ್ರಸಾದ ಅರಿವಿಂಗೆ ಸೋಕಿದಲ್ಲಿ ಅರಿವೆಲ್ಲ*
*ಅಖಂಡ ಪ್ರಸನ್ನ ಪ್ರಸಾದ ರೂಪ ಜಂಗಮವಪ್ಪುದು ತಪ್ಪುದಯ್ಯಾ*
*ಶ್ರೀ ಶಿವಾ ಶಿವಾ ಶ್ರೀಮತ್ಪ್ರಸಾದದ ಮಹಿಮೆಯನೇನೆಂದುಪಮಿಸುವೆನಯ್ಯಾ*
*ಪ್ರಸಾದವೇ ಗುರು, ಪ್ರಸಾದವೇ ಲಿಂಗ*
*ಪ್ರಸಾದವೇ ಜಂಗಮ ಪ್ರಸಾದವೇ ಪರಾತ್ಪರ*
*ಪ್ರಸಾದವೇ ಪರಮಾನಂದ, ಪ್ರಸಾದವೇ ಪರಮಜ್ಞಾನ*
*ಇಂತಪ್ಪ ಮಹಾ ಪರಿಣಾಮ ಪ್ರಸನ್ನ ಪ್ರಸಾದವ*
*ಕೊಂಡು ನಾನು ಬದುಕಿದೆನಯ್ಯಾ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ.*

ಪ್ರಸಾದದಿಂದ ಪ್ರಕೃತಿಭಾವ ತೊಲಗುತ್ತದೆ. ಅಂಗಭಾವ ಹಿಂಗಿ ಅಂಗಭಾವದಲ್ಲಿ ಲಿಂಗಭಾವ ತೊಲಗುತ್ತದೆ. ಪುರುಷ ಸೋಂಕಿದ ಕಬ್ಬಿನಂತಾಗುತ್ತದೆ. ಪದಾರ್ಥವನ್ನು ಪ್ರಸಾದವನ್ನಾಗಿಸಿಕೊಳ್ಳುವ ರೀತಿಯನ್ನು ಅರಿತು ಆಚರಣೆಯಲ್ಲಿ ತರದೆ ಇದ್ದರೆ ಪ್ರಸಾದ ಸಿದ್ಧಿಸದು.

*ಶಿವಪ್ರಸಾದದ ಮಹಿಮೆಯನ್ನು ಕುರಿತು ಬಸವಣ್ಣನವರು,*
*ನೀನೊಲಿದರೆ ಕೊರಡು ಕೊನರುವುದಯ್ಯಾ*
*ನೀನೊಲಿದರೆ ವಿಷವೆಲ್ಲಾ ಅಮೃತವಹುದಯ್ಯಾ*
*ನೀನೊಲಿದರೆ ಸಕಲ ಪಡಿಪದಾರ್ಥ ಇದರಲಿರ್ಪುವು*

ಎಂದು ಹೇಳಿದ್ದಾರೆ.

ಶಿವಾನುಗ್ರಹ ಅಥವಾ ಶಿವಪ್ರಸಾದ ಲಭ್ಯವಾದರೆ ವಿಷವೂ ಅಮೃತವಾಗುತ್ತದೆ. ಸಕಲ ಪಡಿ ಪದಾರ್ಥವೂ ಎದುರಿಗಿರುತ್ತದೆ. ಆದರೆ ಶಿವ ಪ್ರಸಾದ ಸರ್ವರಿಗೂ ಸಿಕ್ಕುವುದಿಲ್ಲ. ತನುಮನಗಳನ್ನು ಸಮರ್ಪಿಸಬಲ್ಲವರಿಗೆ ಶಿವಪ್ರಸಾದ ಸಾಧ್ಯ.

## ಪ್ರಸಾದ ಸ್ವೀಕಾರ ಕ್ರಮ

ಪ್ರಸಾದವನ್ನು ಯಾವ ರೀತಿ ಸ್ವೀಕರಿಸಬೇಕು ಎನ್ನುವುದರ ಬಗೆಗೆ ಪ್ರಸಾದ ತತ್ವದ ಕೆಲವು ನಿಯಮಗಳನ್ನು ವಚನಕಾರರು ತಮ್ಮ ವಚನಗಳಲ್ಲಿ ನಿರೂಪಿಸಿರುವುದನ್ನು ಕಾಣಬಹುದು.





ತೋಂಟದ ಸಿದ್ಧಲಿಂಗ ಯತಿಗಳು ಪ್ರಸಾದ ಸ್ವೀಕಾರದ ಬಗೆಗೆ

*ಲಿಂಗಕ್ಕೆ ಅರ್ಪಿಸಿದ ನೈವೇದ್ಯವ*
*ಲಿಂಗದ ನೆನಹಿನಲ್ಲಿಯೇ ಸ್ವೀಕರಿಸುವುದು*
*ತಟ್ಟುವ ಮುಟ್ಟುವ ಸೋಂಕುವ ಮರ್ಮವನರಿದು*
*ಲಿಂಗ ಮುಖಕ್ಕೆ ನಿವೇದಿಸಿ ಲಿಂಗ ಪ್ರಸಾದವ*
*ಸ್ವೀಕರಿಸುತಿರಬಲ್ಲರೆ ಪ್ರಸಾದಿ ಸ್ಥಲವಿದೆಂಬನಯ್ಯಾ*

ಪ್ರಸಾದವನ್ನು ಸ್ವೀಕರಿಸುವವನು ಲಿಂಗಕ್ಕೆ ಅರ್ಪಿಸಿದ ನೈವೇದ್ಯವ ಲಿಂಗಾರ್ಪಣಾದಿಂದ ಪರಿಶುದ್ಧವಾದಾಗ ಆ ನೈವೇದ್ಯವನ್ನು ಲಿಂಗದ ನೆನಹಿನಲ್ಲಿಯೇ ಸ್ವೀಕರಿಸಬೇಕು ಎಂದು ಹೇಳಿದ್ದಾರೆ.

ಪ್ರಸಾದ ಸ್ವೀಕರಿಸುವವರ ಸ್ಥಿತಿಯನ್ನು ಷಣ್ಮುಖ ಸ್ವಾಮಿಗಳು ತಮ್ಮ ವಚನದಲ್ಲಿ :

*ಶಿವ ಪ್ರಸಾದವ ನಾರೋಗಣೆಯ ಮಾಡುವಲ್ಲಿ*
*ಕರಣಂಗಳ ಕಡೆಗೆ ತುಳುಕದಿರಬೇಕು*
*ಚಿತ್ತವು ಅತ್ತಿತ್ತ ಹರಿಯದಿರಬೇಕು*
*ಶಿವಧ್ಯಾನ ಪರಾಯಣನಾಗಿರಬೇಕು*
*ಶಿವಪ್ರಸಾದದಲ್ಲಿ ಮನವು ಮಗ್ನವಾಗಿರಬೇಕು*
*ಪ್ರಸಾದವೇ ಬ್ರಹ್ಮ ಎಂಬ ಭಾವ ಬಲಿದಿರಬೇಕು*
*ತುತ್ತು ತುತ್ತಿಗೆ ಶಿವಮಂತ್ರವ ಉಚ್ಚರಿಸುತಿರಬೇಕು*
*ಶಿವ ಪ್ರಸಾದದ ಘನವ ಕಂಡು ಮನವು ಹಿಗ್ಗಿ*
*ಪರಮ ಪರಿಣಾಮದೊಳಗೋಲಾಡುತಿರಬೇಕು*

ಎಂದು ಹೇಳಿದ್ದಾರೆ.

ಘನಲಿಂಗದೇವರು ತನ್ನ ವಚನವೊಂದರಲ್ಲಿ ಫಲಾಹಾರ ಸಾತ್ವಿಕವಾದರೂ ತನುವಿನ ಆಸೆಗಾಗಿ ತತ್ತ್ವ ಮೀರಿ ಲಿಂಗಕ್ಕೆ ಅರ್ಪಿಸದೆ ಪ್ರಸಾದವಾಗಿಸದೆ ಸ್ವೀಕರಿಸಿದರೆ ತನು ರಕ್ಷಣೆಯಾಗುವುದೇ ಹೊರತು ತತ್ತ್ವದ ರಕ್ಷಣೆಯಾಗುವುದಿಲ್ಲ. ಹಸಿವಿಗಾಗಿ ಅನರ್ಪಿತವಾದ ಪದಾರ್ಥವನ್ನು ಸೇವಿಸುವುದು ಪ್ರಸಾದಿಗೆ ತರವಲ್ಲ. ಈ ರೀತಿ ಏನಾದರೂ ಅನರ್ಪಿತವಾದ ಪದಾರ್ಥವನ್ನು ಸ್ವೀಕರಿಸಿದರೆ ಹೀನ ಜನ್ಮಾಂತರಕ್ಕೆ ಹೋಗಬೇಕಾಗುತ್ತದೆ ಎಂದಿದ್ದಾರೆ.

ಚನ್ನಬಸವಣ್ಣನವರು ಕೆಳಕಂಡ ವಚನದಲ್ಲಿ ಪ್ರಸಾದವ ಪರಿಗ್ರಹಿಸುವ ಪರಿಯನ್ನು ಸೈದ್ಧಾಂತಿಕ ಹಿನ್ನೆಲೆಯಲ್ಲಿ ಪ್ರತಿಪಾದಿಸಿದ್ದಾರೆ.

*ಲಿಂಗ ಪ್ರಸಾದಿಗಳೆಂದು ನುಡಿಯಬಲ್ಲವರು ನೀವು ಕೇಳಿರೊ*
*ಸಜ್ಜನ ಶುದ್ಧ ಶಿವಾಚಾರ ಸಂಪನ್ನರಪ್ಪ ಸದ್ಭಕ್ತರು ತಮ್ಮ ಲಿಂಗಕ್ಕೆ*
*ಮಂತ್ರೋಪದೇಶದಿಂದ ಅಷ್ಟ ವಿಧಾರ್ಚನೆ ಷೋಡಶೋಪಚಾರವ ಮಾಡಿ*
*ಸಕಲ ಪದಾರ್ಥವೆಲ್ಲವನು ಪ್ರಮಾಣದಲ್ಲಿ ಭರತಮಾಗಿ ಗಡಣಿಸಿ*
*ತನುಕರಗಿ ಮನಕರಗೆ ನಿರ್ವಾಣ ನಿಷ್ಪತ್ತಿಯ ಗಟ್ಟಿಕೊಂಡು*
*ತಟ್ಟುವ ಮುಟ್ಟುವ ಭೇದದಲ್ಲಿ ಏಕಚಿತ್ತವಾಗಿ ಲಿಂಗಾರ್ಪಿತವ ಮಾಡುವುದು*
*ಆ ಪ್ರಸಾದವನು ತಮ್ಮ ಪಂಚೇಂದೀಯ ಸಪ್ತಧಾತು ತೃಪ್ತರಾಗಿ ಭೋಗಿಸುವುದು*
*ಲಿಂಗ ಪ್ರಸಾದ ಗ್ರಾಹಕನ ಪರಿ ಇದು ಕೂಡಲ ಚೆನ್ನ ಸಂಗಮದೇವಾ*

ಅಂದರೆ ಮಿಂದು ಮಡಿಯುಟ್ಟು ಪೂಜಿಸಿದ ಬಳಿಕ ಪ್ರಸಾದಕ್ಕೆ ಅಣಿಯಾಗಬೇಕು. ಮೊದಲು ಮಾಡಿದ ಪಡಿಪದಾರ್ಥವನ್ನೆಲ್ಲಾ ಪಾತ್ರೆಯಲ್ಲಿಡಬೇಕು. ಈ ಪಡಿ ಪದಾರ್ಥಗಳನ್ನು ಅಂಗಕ್ಕೆಂದು ಆಶಿಸದೆ ಲಿಂಗಕ್ಕೆಂದು ಏಕೈಕ ಮನಸ್ಸಿನಿಂದ ಲಿಂಗಕ್ಕೆ ಅರ್ಪಿಸಿ ಆಮೇಲೆ ಲಿಂಗದ ನೆನಹಿನೊಡನೆ ಸೇವಿಸಬೇಕು. ಇದರಿಂದಾಗಿ ಪಂಚೇಂದ್ರಿಯ ಮತ್ತು ಸಪ್ತಧಾತುಗಳು ಪರಿಶುದ್ಧವಾಗುತ್ತವೆ. ಯಾವ ಯಾವ ಪಡಿ ಪದಾರ್ಥಗಳನ್ನು ಆರೋಗಿಸಬೇಕೆಂದು ನಿಶ್ಚಯಿಸಿ ಸಂಗ್ರಹಿಸಲಾಗಿರುತ್ತದೆಯೋ ಅವನ್ನೆಲ್ಲಾ ಶಿವಲಿಂಗಕ್ಕೆ ಸಮರ್ಪಿಸಿ ಬಳಿಕ ತಾನು ಸೇವಿಸಬೇಕು.

ವಚನಕಾರರ ವಚನಗಳಲ್ಲಿ ಪ್ರಸಾದ ತತ್ತ್ವದ ನಿಯಮದ ಬಗೆಗೆ ಕಂಡುಬರುವ ಮತ್ತೊಂದು ನಿಯಮವೆಂದರೆ ಉಂಡು ಉಳಿಸಬಾರದು. ಈ ನಿಯಮವು ಬೇಕಾದಷ್ಟು ತಿಂದು ಬೀದಿಗೆ ಚೆಲ್ಲುವ ಅವಿವೇಕವನ್ನು ವಿರೋಧಿಸುತ್ತದೆ. ಪ್ರಸಾದೋಪಾದಿಯ ಪವಿತ್ರವಾದ ಆಹಾರವನ್ನು ವ್ಯರ್ಥವಾಗಿ ಚೆಲ್ಲಬಾರದು. ಶರಣರು ಅನ್ನವನ್ನು ಲಿಂಗರೂಪದ ಪ್ರಸಾದವೆಂದು ಪರಿಗ್ರಹಿಸಿದರು. ಹೀಗಾಗಿ ಶುದ್ಧ ಆಹಾರ ತೆಗೆದುಕೊಳ್ಳಬೇಕು ಎಂಬುದನ್ನು ಮಾತ್ರವಲ್ಲದೆ ತೆಗೆದುಕೊಳ್ಳುವ ಕ್ರಮವನ್ನು ನಿರೂಪಿಸಿದರು. ಎಲೆಯಲ್ಲಿ ಊಟ ಮಾಡಿದರೆ ಒಂದು ಅಗುಳನ್ನು ಬಿಡದೆ ಸೇವಿಸುವುದು ಕಷ್ಟವಾದ್ದರಿಂದ ಎಲೆಯಲ್ಲಿ ಊಟಮಾಡಬಾರದು. ಪ್ರಸಾದವನ್ನು ಎಲೆಯಲ್ಲಿ ಬಡಿಸಿಕೊಂಡು ಅರ್ಧಸೇವಿಸಿ ಉಳಿದುದನ್ನು ಎಸೆದು ಶ್ವಾನ ಸೂಕರಗಳ ಪಾಲು ಮಾಡುವುದನ್ನು ಚನ್ನಬಸವಣ್ಣನವರು,

*'ಭಕ್ತಿ ಲಿಂಗಾರ್ಪಿತವ ಮಾಡಿದ ಪತ್ರ, ಭಾಜನಮಂ*
*ಶ್ವಾನ ಸೂಕರಗಾರ್ದಭ ಕುಕ್ಕುಟ ಮಾರ್ಜಾಲಂಗಳು*
*ಮುಟ್ಟಿದೊಡೆ ಅವುಗಳ ಕೂಡೆ ಸಹಭೋಜನ ಮಾಡಿದಂತೆ'*

ಎಂದು ಖಂಡಿಸಿದ್ದಾರೆ.

ಈ ಮಾತನ್ನು ನಿಜಕ್ಕೂ ಈಗಿನ ನಮ್ಮ ದೇಶದ ಪರಿಸ್ಥಿತಿಯಲ್ಲಿ ಪ್ರತಿಯೊಬ್ಬರೂ ವಿಚಾರಮಾಡುವುದು ಮನನೀಯವಾಗಿದೆ. ಆಹಾರವನ್ನು ಸ್ವೀಕರಿಸುವಾಗ ಇನ್ನೂ ಕೆಲವು ನಿಯಮಗಳನ್ನು ಅನುಸರಿಸಿದರು. ದೇಹಕ್ಕೆ ಎಷ್ಟು ಬೇಕೋ ಅಷ್ಟನ್ನು ತೆಗೆದುಕೊಳ್ಳಬೇಕು. ಊಟವನ್ನು ಏಕಾಗ್ರ ಚಿತ್ತತೆಯಿಂದ ಸೇವಿಸಬೇಕು. ಅಷ್ಟೇ ಅಲ್ಲದೇ ಆಹಾರವನ್ನು ಸೇವಿಸುವಾಗ,

*ಮೌನದಲುಂಬುದು ಆಚಾರವಲ್ಲ*
*ಲಿಂಗಾರ್ಪಿತವ ಮಾಡಿದ ಬಳಿಕ ತುತ್ತಿಗೊಮ್ಮೆ*
*ಶಿವಶರಣೆನ್ನುತ್ತಿರಬೇಕು*
*ಕರಣ ವೃತ್ತಿಗಳಡಗುವವು ಕೂಡಲ ಸಂಗನ ನೆನೆಯುತ್ತ ಉಂಡರೆ*

ಎಂದು ಪ್ರಸಾದವನ್ನು ಕರುಣಿಸಿರುವ ದೇವನನ್ನು ನೆನೆಯಬೇಕು ಎಂದಿದ್ದಾರೆ. ನಾವು ಸ್ವೀಕರಿಸುವ ಆಹಾರ ಅದು ಕೇವಲ ಹೊಟ್ಟೆಯನ್ನು ತುಂಬಿ ದೇಹವನ್ನು ಬೆಳಸುವುದಷ್ಟೇ ಆಗಬಾರದು. ದೇಹವನ್ನು ಪರಿಶುದ್ಧಗೊಳಿಸಿ ಮನಸ್ಸಿನ ಪವಿತ್ರತೆಗೆ ಕಾರಣವಾಗುವ ಪ್ರಸಾದವಾಗಬೇಕು. ಒಡಲ ಕಳವಳಕ್ಕೆ ಬಾಯ ಸವಿಗೆ ಬಯಸಿ

ಉಂಡೆನಾದರೆ ನಿಮ್ಮ ತೊತ್ತಿನ ಮಗನಲ್ಲಾ ಎಂದಿದ್ದಾರೆ ಬಸವಣ್ಣನವರು. ಯಾವುದು ಶಿವನಿಗೆ ಸಮರ್ಪಿತವಾಗವುದೋ ಅದು ಶುದ್ಧವಾಗಿ ಪ್ರಸಾದವೆನ್ನಿಸಿಕೊಳ್ಳುವುದು ಎಂಬ ವಿವರ ಅನ್ನ ಶುದ್ಧಾಯ ಮಹತ್ವವನ್ನು ತಿಳಿಸುತ್ತದೆ. ನಾವು ಸ್ವೀಕರಿಸುವ ಆಹಾರವೆಲ್ಲಾ ಶಿವನ ಪ್ರಸಾದ, ಆತನ ಕೃಪೆಯಿಂದ ಬೆಳೆದು ಬಂದುದು. ಶಿವನ ಸಾಕ್ಷಾತ್ಕಾರವನ್ನು ಪಡೆಯಲು ಸಾಧಕನಾದವನ ದೇಹಕ್ಕೆ ಚೈತನ್ಯವನ್ನೊದಗಿಸುವ ದಿವ್ಯಶಕ್ತಿ ಅನ್ನ. ಅದನ್ನು ಪವಿತ್ರ ಭಾವನೆಯಿಂದ ಸ್ವೀಕರಿಸಬೇಕು.

## ಪ್ರಸಾದದ ಬಗೆಗಳು ಮತ್ತು ಅವುಗಳ ಸಂಕ್ಷಿಪ್ತ ವಿವರಣೆ

ಪ್ರಸಾದ ತತ್ತ್ವವನ್ನು ವಚನಕಾರರು ಸೂಕ್ಷ್ಮವಾಗಿ ವಿವೇಚಿಸಿದ್ದಾರೆ. ಪ್ರಸಾದವನ್ನು ಆಚರಿಸುವ ಮಾರ್ಗದಲ್ಲಿ ಅದನ್ನು ಬಗೆ ಬಗೆಯಾಗಿ ವಿಂಗಡಿಸಿದ್ದಾರೆ. ಈ ವಿಭಾಗಗಳ ಮೂಲ ಉದ್ದೇಶ ಅರ್ಪಣತ್ವವನ್ನು ಕುರಿತದ್ದಾಗಿದೆ. ಪ್ರಸಾದವನ್ನು ಶರಣರು ೧. ತ್ರಿವಿಧ ಪ್ರಸಾದ, ೨. ಚತುರ್ವಿಧ ಪ್ರಸಾದ, ೩. ಪಂಚವಿಧ ಪ್ರಸಾದ, ೪. ಷಡ್ವಿಧ ಪ್ರಸಾದ, ೫. ನವವಿಧ ಪ್ರಸಾದ, ೬. ಏಕಾದಶ ಪ್ರಸಾದ ಎಂದು ವಿಭಾಗಿಸಿದ್ದಾರೆ.

ತ್ರಿವಿಧ ಪ್ರಸಾದ ಏಕಾದಶ ಪ್ರಸಾದದ ಬಗೆಗೆ ಚನ್ನಬಸವಣ್ಣನವರು ಸವಿವರವಾಗಿ ನಿರೂಪಿಸಿದ್ದಾರೆ.

**ತ್ರಿವಿಧ ಪ್ರಸಾದ :** ಶುದ್ಧ, ಸಿದ್ಧ, ಪ್ರಸಿದ್ಧ ಎಂದು ತ್ರಿವಿಧ ಪ್ರಸಾದವನ್ನು ಹೇಳುತ್ತಾ

*ಶುದ್ಧ ಪ್ರಸಾದ ಗುರುಮುಖದಿಂದ ಬಂದುದು*
*ಸಿದ್ಧ ಪ್ರಸಾದ ಲಿಂಗ ಮುಖದಿಂದ ಬಂದುದು*
*ಪ್ರಸಿದ್ಧ ಪ್ರಸಾದ ಜಂಗಮ ಮುಖದಿಂದ ಬಂದುದು.*

ಈ ಪ್ರಸಾದ ತ್ರಯಗಳು ಗುರು, ಲಿಂಗ, ಜಂಗಮಗಳಿಂದ ಪ್ರಾಪ್ತವಾಗುತ್ತವೆ. ಪ್ರಸಾದವು ಗುರುಲಿಂಗ ಜಂಗಮರಿಗೆ ಅರ್ಪಿತವಾದಾಗ ಗುರುವಿನಿಂದ ಬಂದುದು ಶುದ್ಧ ಪ್ರಸಾದವೆಂದೂ, ಲಿಂಗಾರ್ಪಿತವಾಗಿ ಬಂದುದು ಸಿದ್ಧ ಪ್ರಸಾದವೆಂದೂ ಜಂಗಮಕ್ಕೆ ಅರ್ಪಿತವಾದುದು ಪ್ರಸಿದ್ಧ ಪ್ರಸಾದವೆಂದು ಕರೆಯಲ್ಪಡುತ್ತದೆ. ಈ ಪ್ರಸಾದ ತ್ರಯಗಳು ತನು, ಮನಸ್ಸು, ಭಾವ ಶುದ್ಧಿಯನ್ನುಂಟು ಮಾಡುತ್ತವೆಂಬುದು ಪ್ರಸಾದ ಸಿದ್ಧಾಂತದ ರಹಸ್ಯ.

**ಏಕಾದಶ ಪ್ರಸಾದ :** ಈ ಏಕಾದಶ ಪ್ರಸಾದಗಳಲ್ಲಿ ವೀರಶೈವನ ಪ್ರಗತಿಗೆ ಸಂಬಂಧಿಸಿದ ಎಲ್ಲಾ ಆಚರಣೆಗಳು ಅಡಕವಾಗಿರುತ್ತವೆ. ಏಕಾದಶ ಪ್ರಸಾದಗಳ ವಿಭಾಗ ಕ್ರಮ ಮತ್ತು ವಿವರಣೆಯನ್ನು ಬೇರೆ ಬೇರೆ ಆಚರಣೆಯ ದೃಷ್ಟಿಯಿಂದ ವಚನಕಾರರು ವಿವರಿಸಿದ್ದಾರೆ. ಆದರೂ ಅವೆಲ್ಲವೂ ಮೂಲದಲ್ಲಿ ಒಂದೇ ಅರ್ಥವುಳ್ಳವುಗಳಾಗಿವೆ.

ಚನ್ನಬಸವಣ್ಣನವರು ವಚದಲ್ಲಿ ಏಕಾದಶ ಪ್ರಸಾದಗಳನ್ನು ಕುರಿತು ಅನಾದಿ ಕುಳಸನ್ಮತವಾದ ಏಕಾದಶ ಪ್ರಸಾದದ ಕುಳಿವ ತಿಳಿವಡೆ ಪ್ರಮಥದಲ್ಲಿ ಗುರುಪ್ರಸಾದ, ದ್ವಿತೀಯದಲ್ಲಿ ಲಿಂಗ ಪ್ರಸಾದ, ತೃತೀಯದಲ್ಲಿ ಜಂಗಮ ಪ್ರಸಾದ, ಚತುರ್ಥದಲ್ಲಿ ಪ್ರಸಾದಿ ಪ್ರಸಾದ, ಪಂಚಮದಲ್ಲಿ ಆಪ್ಯಾಯನ ಪ್ರಸಾದ, ಷಷ್ಠದಲ್ಲಿ ಸಮಯ ಪ್ರಸಾದ, ಸಪ್ತಮದಲ್ಲಿ ಪಂಚೇಂದ್ರಿಯ ವಿರಹಿತ ಪ್ರಸಾದ, ದಶಮದಲ್ಲಿ ಸಮತಾ ಪ್ರಸಾದ, ಏಕಾದಶದಲ್ಲಿ ಜ್ಞಾನ ಪ್ರಸಾದ ಎಂದು ಹೆಸರಿಸಿದ್ದಾರೆ. ಏಕಾದಶ ಪ್ರಸಾದದ ಮೊದಲ ಮೂರು ಪ್ರಸಾದಗಳನ್ನು ಶುದ್ಧ, ಸಿದ್ಧ, ಪ್ರಸಿದ್ಧ ಎಂದು ಕರೆಯುತ್ತಾರೆ. ಏಕಾದಶ ಪ್ರಸಾದಿಗಳ ಆಚರಣೆಯ ಕ್ರಮವನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

೧. **ಶುದ್ಧ ಪ್ರಸಾದ :** ಮಂತ್ರ, ಧ್ಯಾನದಿಂದ ಪದಾರ್ಥದ ಪೂರ್ವಾಶ್ರಮ ವಳಿದುದೇ ಶುದ್ಧ ಪ್ರಸಾದ.

೨. **ಸಿದ್ಧ ಪ್ರಸಾದ :** ಶುದ್ಧ ಪ್ರಸಾದವನ್ನು ಲಿಂಗಕ್ಕೆ ನೈವೇದ್ಯವ ಮಾಡಲು ಆಗ ಪ್ರಸಾದದ ಕಳೆ ಲಿಂಗದಲ್ಲಿ ನೆಲೆಗೊಳ್ಳುತ್ತದೆ. ಇದು ಸಿದ್ಧ ಪ್ರಸಾದ.

೩. **ಪ್ರಸಿದ್ಧ ಪ್ರಸಾದ :** ಸಿದ್ಧ ಪ್ರಸಾದವನ್ನು ಜಿಹ್ವೆಯಲ್ಲಿ ಸ್ವೀಕರಿಸುವುದು. ಇದು ಜಂಗಮ ಮುಖವಾದುದೆಂದು ಭಾವಿಸಿ ಹಾಗೆಯೇ ಸ್ವೀಕರಿಸಿದಲ್ಲಿ ಪ್ರಸಿದ್ಧ ಪ್ರಸಾದವಾಗುತ್ತದೆ.

೪. **ಆಪ್ಯಾಯನ ಪ್ರಸಾದ :** ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದಗಳು ಲಿಂಗಮುಖವಾದವುಗಳೆಂಬ ದೃಢಭಾವವು ನೆಲೆಗೊಳ್ಳಲು ಅದು ಅಪ್ಯಾಯನ ಪ್ರಸಾದ.

೫. **ಸಮಯ ಪ್ರಸಾದ :** ಪ್ರಸಾದದ ಸೇವನಾ ಕಾಲದಲ್ಲಿ ಇತರ ಪದಾರ್ಥಗಳಿಗೆ ಗಮನ ಹರಿಸದೆ ಅವು ಅನರ್ಪಿತವೆಂದು ತಿಳಿಯುವುದು ಸಮಯ ಪ್ರಸಾದ.

೬. **ಪಂಚೇಂದ್ರಿಯ ವಿರಹಿತ ಪ್ರಸಾದ :** ಈ ಪ್ರಸಾದ ಸೇವನೆಯಲ್ಲಿ ಪಂಚೇಂದ್ರಿಯಗಳು ಮುಟ್ಟದ ಮುನ್ನವೆ ಅವುಗಳನ್ನು ಸೇವಿಸುವುದು ಪಂಚೇಂದ್ರಿಯ ವಿರಹಿತ ಪ್ರಸಾದ.

೭. **ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದ :** ಅಂಗದ ಕರಣಗಳಿಗೆ ದೂರವಾಗಿ ಪ್ರಸಾದ ಸ್ವೀಕರಿಸುವುದು.

೮. **ಪ್ರಸಾದಿಯ ಪ್ರಸಾದ :** ಪ್ರಸಾದಿಯ ಪ್ರಸಾದವನ್ನು ಜಂಗಮಕ್ಕೆ ಕೊಟ್ಟು ಸಮರಭೋಗ ಮಾಡುವುದು ಪ್ರಸಾದಿಯ ಪ್ರಸಾದ.

೯. **ಸದ್ಭಾವ ಪ್ರಸಾದ :** ಪ್ರಸಾದವನ್ನು ಸದ್ಭಾವದಿಂದ ಸೇವಿಸುವುದು.

೧೦. **ಸಮತಾ ಪ್ರಸಾದ :** ಹಸಿವು ಅಡಗಿ ಶಾಂತಿಸೈರಣೆಯಿಂದಾಗುವುದೇ ಸಮತಾ ಪ್ರಸಾದ.

೧೧. **ಜ್ಞಾನ ಪ್ರಸಾದ :** ಸಮತಾ ಪ್ರಸಾದದಲ್ಲಿ ತೃಪ್ತಿಯನ್ನು ಹೊಂದಿ ಕ್ರಿಯಾಖಂಡಿತ ಮಾಡುವಲ್ಲಿ ಅಖಂಡ ಪರಿಪೂರ್ಣ ಪ್ರಸಾದಿಯಾಗಿರುವುದು ಜ್ಞಾನ ಪ್ರಸಾದ.

ಈ ಏಕಾದಶ ಪ್ರಸಾದಗಳ ಆಚರಣೆಯು ಬಾಹ್ಯ ಶರೀರಕ್ಕೆ
(ಅಂಗ) ಸಂಬಂಧಪಟ್ಟುದಾಗಿದೆ. ಪ್ರಾಣಕ್ಕೆ ಮತ್ತು ಜ್ಞಾನಕ್ಕೆ





ಸಂಬಂಧಪಡುವ ಬೇರೆ ರೀತಿಯ ಆಚರಣೆಯ ಏಕಾದಶ ಪ್ರಸಾದಗಳುಂಟು. ಮೇಲೆ ಉಲ್ಲೇಖಿಸಿರುವ ಏಕಾದಶ ಪ್ರಸಾದಗಳನ್ನು ಆಚರಿಸುವ ಬಗೆಗೆ ಹೇಳುವುದಾದರೆ ಶುದ್ಧ, ಸಿದ್ಧ, ಪ್ರಸಿದ್ಧ ಪದಾರ್ಥಗಳ ಮೂಲಕ ಗುರು, ಲಿಂಗ, ಜಂಗಮಗಳನ್ನು ಮೊದಲು ಅರಿಯಬೇಕು. ಹೀಗೆ ಅರಿತು ಮುಂದೆ ಹೇಗೆ ಆಚರಿಸಬೇಕು ಎಂಬುದನ್ನು ಮುಂದಿನ ಎಂಟು ಪ್ರಸಾದಗಳು ಒಳಗೊಂಡಿರುತ್ತವೆ. ವಚನಗಳಲ್ಲಿ ನಿರೂಪಿತವಾಗಿರುವ ಏಕಾದಶ ಪ್ರಸಾದದ ನಿರೂಪಣೆ ಗೂಢವೂ ಉದಾತ್ತವಾದವುಗಳು ಆಗಿವೆ.

## ಪ್ರಸಾದ ಮಹಿಮೆಯನ್ನು ಮೆರೆದ ಶಿವಶರಣರ ಸಂಕ್ಷಿಪ್ತ ವಿವರ

ಕೆಲವು ವಚನಕಾರರ ಜೀವನ ಚರಿತ್ರೆಯಲ್ಲಿ ಪ್ರಸಾದ ತತ್ವವನ್ನು ಸಾರುವ ಘಟನೆ ಒಳಗೊಂಡಿರುವುದನ್ನು ಕಾಣಬಹುದಾಗಿದೆ. ಬಸವಣ್ಣ, ಬಿಬ್ಬಿ ಬಾಚಯ್ಯ, ಮರುಳ ಶಂಕರರ ಜೀವನ ಚರಿತ್ರೆಯಲ್ಲಿ ಪ್ರಸಾದವು ಹಾಸುಹೊಕ್ಕಾಗಿರುವುದನ್ನು ಕಾಣಬಹುದಾಗಿದೆ.

ಬಸವಣ್ಣನವರ ಚರಿತ್ರೆಯಲ್ಲಿ ಬರುವ ಪ್ರಸಾದ ತತ್ವವನ್ನು ಕುರಿತು ಚನ್ನಬಸವಣ್ಣನವರ ವಚನಗಳಲ್ಲಿ ಉಲ್ಲೇಖವಿದೆ.

*ಬಸವಣ್ಣನ ಭಕ್ತಿ ಪ್ರಸಾದವ ಕೊಂಡು ನಾನು ಬದುಕಿದೆನು*
*ಆ ಬಸವಣ್ಣನ ಪ್ರಸಾದದಿಂದ ಅಲ್ಲಮ ಪ್ರಭುದೇವರು ತೃಪ್ತಿಯಾದರು*
*ಅಲ್ಲಮ ಪ್ರಭುದೇವರು ಕೊಂಡ ಪ್ರಸಾದದ ತೃಪ್ತಿ*
*ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮಕ್ಕೆ ತೃಪ್ತಿಯಾಯಿತ್ತು*
*ಆಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮಕೊಂಡ ಪ್ರಸಾದದ ತೃಪ್ತಿ*
*ಸಚರಾಚರವೆಲ್ಲವೂ ಕೂಡಿ ತೃಪ್ತಿಯಾಯಿತೆಂದರೆ*
*ಇಲ್ಲವೆಂದು ಬಿಜ್ಜಳನು ತರ್ಕಿಸಲು*
*ಕಪ್ಪೆಯ ಒಡಲೊಳಗೆ ಪ್ರಭುವಿನ ಪ್ರಸಾದವ ತೋರನೆ ಬಸವಣ್ಣನು*
*ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ*
*ಬಸವಣ್ಣನ ಪ್ರಭುದೇವರ ಪ್ರಸಾದ ತ್ರೈಜಗದೊಳಗೆ ಬೆಳವಿಗೆಯಾಯಿತ್ತು.*

ಈ ವಚನದಿಂದ ವಿದಿತವಾಗುವ ಸಂಗತಿ ಎಂದರೆ ಬಸವಣ್ಣನವರು ನಡೆಸುವ ದಾಸೋಹಕ್ಕೆ ಅಲ್ಲಮಪ್ರಭು ಬಂದು ಅಸಂಖ್ಯಾತ ಗಣಗಳಿಗೆಂದು ಮಾಡಿದ ಪ್ರಸಾದವನ್ನು ತಾವೊಬ್ಬರೆ ಆರೋಗಿಸಿ ತೃಪ್ತಿಯಿಂದ ಹೋಗುವರು. ಅನಂತರ ಬಸವಣ್ಣನವರು ಸಭೆಯಲ್ಲಿ ಪ್ರಭುವು ಪ್ರಸಾದವನ್ನು ಸ್ವೀಕರಿಸಿದ್ದರಿಂದ ಸಚರಾಚರವೆಲ್ಲವೂ ತೃಪ್ತಿಯಾಯಿತು ಎನ್ನುವರು. ಅದಕ್ಕೆ ಬಿಜ್ಜಳನು ಉಂಡವನೊಬ್ಬನು ಅಖಿಲ ಕುಕ್ಷಿಯೊಳಗಿಹುದು ಸುಳ್ಳು ಎನ್ನುವನು. ಅದಕ್ಕೆ ಪ್ರತಿಯಾಗಿ ಬಸವಣ್ಣನವರು ಉಂಡುದುಂಟು ಎಲ್ಲರ ಹೊಟ್ಟೆಯೊಳಗಿಟ್ಟುದುಂಟು ಎಂದು ಹೇಳಲು, ಬಿಜ್ಜಳನು ಒಂದು ಕಪ್ಪೆಯನ್ನು ತರಿಸಿ ಇದರ ಹೊಟ್ಟೆಯಲ್ಲಿ ಉಂಡುದನ್ನು ತೋರಿಸು ಎನ್ನುವನು. ಬಸವಣ್ಣನವರು ಅದರ ಹೊಟ್ಟೆಯನ್ನು ಬಗಿದು ಶೇಷ ಪ್ರಸಾದವನ್ನು ತೋರಿಸುವರು. ಈ ವಚನದಲ್ಲಿ ನಿರೂಪಿತವಾಗಿರುವ ಕಥೆಯಿಂದ ಪ್ರಸಾದದಲ್ಲಿ ನಂಬಿಕೆ ಮತ್ತು ಪವಿತ್ರ ಭಾವನೆ ವ್ಯಕ್ತವಾಗಿರುವುದನ್ನು ಕಾಣಬಹುದಾಗಿದೆ.

ಬಸವಣ್ಣನವರು ಲಿಂಗ ಪ್ರಸಾದ ಸೋಂಕಿನಿಂದ ವಿಷವನ್ನು ಅಮೃತಮಯ ಪ್ರಸಾದವನ್ನಾಗಿ ಮಾಡಿದರು ಎಂದು ಚನ್ನಬಸವಣ್ಣನವರು ವಚನದಲ್ಲಿ ಹೇಳಿದ್ದಾರೆ.

*ಲಿಂಗ ಪ್ರಸಾದದ ಸೋಂಕಿನಿಂದ ಇರುವೆ ರುದ್ರನಾಯಿತ್ತು*
*ಲಿಂಗ ಪ್ರಸಾದದ ಸೋಂಕಿನಿಂದ ವಿಷವನಮೃತ ಮಾಡಿಮೆರೆದ ಬಸವಣ್ಣ*
*ಇದು ಕಾರಣ ಕೂಡಲ ಚೆನ್ನಸಂಗಯ್ಯ ನಿಮ್ಮ ಪ್ರಸಾದದ ಮಹಿಮೆ*

ಪ್ರಸಾದಿ ಬಿಬ್ಬಿಬಾಚಯ್ಯನನ್ನು ಕುರಿತ ಸಕಲೇಶ ಮಾದರಸ ಮತ್ತು ಮಡಿವಾಳ ಮಾಚಯ್ಯನ ವಚನಗಳಲ್ಲಿ ಪ್ರಸಾದದ ಮಹಿಮೆ ವ್ಯಕ್ತವಾಗಿದೆ.

*ಪ್ರಸಾದದ ಬಿಬ್ಬಿ ಬಾಚಯ್ಯ ಮೆರೆಯುತ ಬಪ್ಪಲ್ಲಿ*
*ಅರಿಯದೆ ನಿಂದಿಸಿದಡೆ ಹರಿದು ಉರಿಯ ನಾಲಗೆ ಗ್ರಾಮದಿ*
...............................................
*ಹರನಿತ್ತ ನಿರೂಪವಿಡಿಸಿದ ಮಾರ್ಗದಲಿ*
*ಈ ಮಹಾದಿವ್ಯ ಪ್ರಸಾದದ ಸುಖವನರಿದು*
*ಬಿಬ್ಬಿ ಬಾಚಯ್ಯ ಪರವಾದಿಗಳ ಪುರುವ ಸುಟ್ಟ*

ಬಾಚಯ್ಯನೆಂಬ ಶರಣನು ಒಂದು ದಿನ ಸಿದ್ಧ ಪ್ರಸಾದವನ್ನು ಬಂಡಿಯಲ್ಲಿ ತುಂಬಿಕೊಂಡು ಬರುತ್ತಿರಲು ವಿಪ್ರರು ಇತ್ತ ಬರಬೇಡ ನಿಲ್ಲಿ, ಕುಲಹೀನರ ಎಂಜಲನ್ನು ಗುಡಿಸಿ ತಂದು ಅರಿವೆಯಲ್ಲಿ ಮುಚ್ಚಿಟ್ಟರೆ ಆಯಿತೇ? ಎನ್ನುತ್ತ ಪ್ರಸಾದವನ್ನು ನಿಂದಿಸುವರು. ಅದಕ್ಕೆ ಬಾಚಯ್ಯನು ಪ್ರಸಾದವನ್ನು ನಿಂದಿಸದಿರಿ ಅದು ನಿಮ್ಮನ್ನು ಆಹುತಿ ತೆಗೆದುಕೊಳ್ಳುತ್ತದೆ ಎನ್ನುವನು. ಅದಕ್ಕೆ ವಿಪ್ರರು ಅದೇನು ಸಿಂಹವೋ ಶರಭವೋ, ಹುಲಿಯೋ, ಸಿಡಿಲೋ ಕಾಳಕೂಟವೊ, ಕಾಳ್ಗಿಚ್ಚೋ ಎನ್ನುತ್ತ ಬಂಡಿಗೆ ಮುತ್ತಿಗೆ ಹಾಕುವರು. ಆಗ ಬಾಚಯ್ಯನು ಪ್ರಸಾದದ ಮೇಲಿನ ಹೊದಿಕೆಯನ್ನು ತೆಗೆದು ಎಲಾ ವಿಪ್ರರಿರಾ ಓಡಿರಿ. ಅಗ್ನಿ ಬರುತ್ತಿದೆ ಎನ್ನುತ್ತ ಪ್ರಸಾದವನ್ನು ತೆಗೆದುಕೊಂಡು ಅವರ ಮನೆಗಳತ್ತ ಎಸೆಯುವನು. ಆ ಕ್ಷಣವೇ ಛಿಟಿ ಛಿಟಿಲೆಂದು ಉರಿ ಎದ್ದು ವಿಪ್ರರ ಮನೆಗಳೆಲ್ಲವೂ ದಹಿಸತೊಡಗುತ್ತದೆ ಎಂಬುದು ಬಿಬ್ಬಿ ಬಾಚಯ್ಯನ ಚರಿತ್ರೆಯಲ್ಲಿ ತಿಳಿದುಬರುತ್ತದೆ. ಈತನ ಚರಿತ್ರೆಯಲ್ಲಿ ಪ್ರಸಾದವನ್ನು ನಿಂದಿಸಿದವರಿಗೆ ಅದು ಅಗ್ನಿಯಷ್ಟು ಕ್ರೂರವಾಗಬಲ್ಲದು ಎಂಬ ತತ್ತ್ವ ಅಡಕವಾಗಿದೆ. ಅಂಥಹ ಅದ್ಭುತ ಶಕ್ತಿ ಪ್ರಸಾದದಲ್ಲಿ ಹುದುಗಿರುವುದು ವ್ಯಕ್ತವಾಗುತ್ತದೆ.

ಶೂನ್ಯ ಸಂಪಾದನೆಯಲ್ಲಿಯ ಮರುಳ ಶಂಕರ ಸಂಪಾದನೆಯ ಪ್ರಸಂಗದಲ್ಲಿ ಮರುಳ ಶಂಕರರ ಪ್ರಸಾದ ಕಾಯಕದ ನಿಷ್ಠೆಯನ್ನು ಕುರಿತು ವಿವರವಾಗಿ ನಿರೂಪಿತವಾಗಿದೆ. ಮರುಳ ಶಂಕರರು ಹನ್ನೆರಡು ವರ್ಷ ಪರಿಯಂತರ ಪ್ರಸಾದ ಕುಂಡದ ಬಳಿಯಲ್ಲಿಯೇ ವಾಸವಾಗಿದ್ದರು. ಶರಣರ ಒಕ್ಕು ಮಿಕ್ಕ ಪ್ರಸಾದವ ಭುಂಜಿಸಿ ಪ್ರಸಾದಿಯೇ ಆಗಿದ್ದರು. ಪ್ರಸಾದ ವ್ಯವಸ್ಥೆಯೇ ಅವರ ಕಾಯಕ ವ್ಯವಸ್ಥೆಯಾಗಿತ್ತು.

ಮರುಳ ಶಂಕರರನ್ನು ಕುರಿತು,

*'ಪ್ರಸಾದವೇ ಕಾಯವಾಗಿ, ಪ್ರಸಾದವೆ ಧ್ಯಾನ, ಪ್ರಸಾದವೇ ಪ್ರಾಣವಾಗಿ*
*ಪ್ರಸಾದವೇ ಲಿಂಗ ಭೋಗೋಪಯೋಗಿಯಪ್ಪ*
*ನಿಜ ಪ್ರಸಾದಿ ಶಂಕರದೇವಾ ಎಂದೂ ಅಲ್ಲಮಪ್ರಭುವು,*
*ಲಿಂಗಜಂಗಮದ ಒಕ್ಕು ಮಿಕ್ಕ ಪ್ರಸಾದವ ಕೊಂಡು ಮಿಕ್ಕು ಮೀರಿ*
*ನಿಂದ ಮಹಾ ಪ್ರಸಾದಿಯ ನೋಡಾ ಎಂದೂ ಬಸವಣ್ಣನವರು*
*ಸತ್ಯಶರಣರ ಅಂಗದೊಳಗೆ ಬಿದ್ದ ಅಗುಳನೆತ್ತಿಕೊಂಡಿಪ್ಪನೆಂದು*
*ನಿಮ್ಮ ಪ್ರಸಾದದ ಕುಳಿಯೊಳಗೆ ಹನ್ನೆರಡು ವರ್ಷ ಪರಿಯಂತರ*
*ಪ್ರಸಾದಿಯಾಗಿರ್ದ ಮರುಳ ಶಂಕರದೇವ'*

ಎಂದೂ ಚನ್ನಬಸವಣ್ಣನವರು ಮುಕ್ತಕಂಠದಿಂದ ಆತನ ಪ್ರಸಾದ ಕಾಯಕವನ್ನು ಪ್ರಶಂಶಿಸಿದ್ದಾರೆ. ಈ ವಚನಕಾರರ ಈ ಸೂಕ್ತಿಗಳಿಂದ ಮರುಳ ಶಂಕರರ ಜೀವನವೇ ಪ್ರಸಾದ ಜೀವನವಾಗಿರುವುದು ವ್ಯಕ್ತವಾಗಿದೆ.

### ಪ್ರಸಾದದ ಪಾರಿಭಾಷಿಕ ಪದಗಳು

ಪ್ರಸಾದವನ್ನು ಕುರಿತ ವಿವಿಧ ವಚನಕಾರರ ವಚನಗಳಲ್ಲಿ ಪ್ರಸಾದಕ್ಕೆ ಸಂಬಂಧಿಸಿದ ಕೆಲವು ಮಹತ್ವವಾದ ಪದಗಳು ಕಂಡು ಬರುತ್ತವೆ.

೧. *ಒಕ್ಕು ಮಿಕ್ಕ ಪ್ರಸಾದ.*
೨. *ಭಾಜನ – ಭೋಜನ.*
೩. *ಉಂಡು ಪವಾಸಿ ಬಳಸಿ ಬ್ರಹ್ಮಚಾರಿ*

ಈ ಪದಗಳನ್ನು ಪ್ರಸಾದಿಸ್ಥಲದ ಪಾರಿಭಾಷಿಕಗಳೆಂದು ಗುರಿತಿಸಲಾಗಿದೆ.

**ಒಕ್ಕು ಮಿಕ್ಕ ಪ್ರಸಾದ :** ಒಕ್ಕುದು ಎಂದರೆ ಗುರು ಲಿಂಗ ಜಂಗಮರಿಗೆ ಸಮರ್ಪಿಸಿದ ಪ್ರಸಾದ ಮಿಕ್ಕುದು ಎಂದರೆ ಅರ್ಪಿತವಾಗಿ ಉಳಿದುದು. ಅಂದರೆ ಸಾಧಕನು ಲಿಂಗಕ್ಕೆ ಸಲ್ಲಿಸಿ ಉಳಿದುದು ಒಕ್ಕು ಮಿಕ್ಕ ಪ್ರಸಾದ ಎಂದೆನಿಸುತ್ತದೆ. ಇನ್ನೊಂದು ರೀತಿಯಲ್ಲಿ ಇದರರ್ಥವನ್ನು ಗ್ರಹಿಸಬಹುದಾದರೆ ಗುರು, ಜಂಗಮರಿಗೆ ಆರೋಗಿಸಿ ಉಳಿದಿದ್ದು ಒಕ್ಕು ಮಿಕ್ಕ ಪ್ರಸಾದ ಎಂದೆನಿಸುತ್ತದೆ. ದಾಸಿಮಯ್ಯ, ಬಸವಣ್ಣ, ಚನ್ನಬಸವಣ್ಣಮುಂತಾದವರ ವಚನಗಳಲ್ಲಿ ಒಕ್ಕುಮಿಕ್ಕ ಪ್ರಸಾದದ ಬಗೆಗೆ ವಿಭಿನ್ನ ರೀತಿಯ ವಿವರಗಳಿವೆ.

**ಭಾಜನ – ಭೋಜನ :** ಭಾಜನ ಎಂದರೆ ಪರಿಯಾಣ ಅಥವಾ ಹರಿವಾಣ. ಹರಿವಾಣ ಎಂದರೆ ಪ್ರಸಾದವನ್ನು ಇರಿಸಲು ಉಪಯೋಗಿಸುವ ಎಡೆಬಟ್ಟಲು. ಎಡೆಮಾಡಿದ ಪದಾರ್ಥಗಳಲ್ಲಿ ಗಂಧ ರಸಾದಿ ಷಟ್ ಪ್ರಸಾದಗಳು ಒಂದುಗೂಡುತ್ತವೆ. ಭೋಜನ ಎಂದರೆ ಆರೋಗಣ ಅಥವಾ ಊಟ. ಆರೋಗಣೆಯ ಮಾಡುವುದು ಒಂದು ಆರಾಧನೆ. ಇದು ಅಂಗ ಮತ್ತು ಲಿಂಗಗಳೆರಡರ ಆರಾಧನೆ. ಆರೋಗಣೆಯಿಂದ ಪ್ರಕೃತಿಭಾವ-ಸದ್ಭಾವಗಳು ತೊಲಗಿ ಪರಮ ಪರಿಣಾಮ ಉಂಟಾಗಬೇಕು. ಆರೋಗಣೆಗೆ ಮುನ್ನ ಅನ್ನಕ್ಕೆ ಸಂಸ್ಕಾರ ಮಾಡಬೇಕು. ಪಾದೋದಕ ಇಲ್ಲವೇ ಮಂತ್ರೋದಕಗಳಿಂದ ವಿಭೂತಿ ಲೇಪಿತ ಹಸ್ತ ಸ್ಪರ್ಶ ಮಂತ್ರ ಪಠಣದಿಂದ ಲಿಂಗಕ್ಕರ್ಪಿಸಿ ಶೇಷ ಪ್ರಸಾದವನ್ನು ಸದ್ಭಾವದಿಂದ ಆರೋಗಿಸಬೇಕು. ಲಿಂಗಕ್ಕೆ ಅರ್ಪಿಸದೆ ಆರೋಗಿಸಬಾರದು.

**ಉಂಡುಪವಾಸಿ – ಬಳಸಿ ಬ್ರಹ್ಮಚಾರಿ :** ಪ್ರಸಾದಿಯು ಲಿಂಗಭೋಗಿ ಮತ್ತು ಉಪಭೋಗಿಯೂ ಆಗಿದ್ದಾನೆ. ಅಂಗಕ್ಕಾಗಿ ಆತ ಎಂದಿಗೂ ಉಣ್ಣನು. ಆತ ಆರೋಗಿಸುವುದು ಲಿಂಗ ಪ್ರಸಾದ. ಪ್ರಸಾದಿಯು ಸರ್ವಾಂಗ ಲಿಂಗಿಯಾದ ಕಾರಣ ಇಂದ್ರಿಯ ಭೋಗಂಗಳೆಲ್ಲವು ಲಿಂಗಕ್ಕೆ ಅರ್ಪಿತವಾಗಿ ಅವನಿಗೆ ಪ್ರಸಾದ ರೂಪವಾಗಿ ದೊರೆಯುತ್ತದೆ ಹೀಗಾಗಿ ಪ್ರಸಾದಿಯು ಉಂಡುಪವಾಸಿ ಬಳಸಿ ಬ್ರಹ್ಮಚಾರಿಯಾಗುತ್ತಾನೆ. ಹಾಗೆಯೇ ಒಂದು ಸುಂದರವಾದ ದೃಶ್ಯವನ್ನು ನೋಡಿದರೆ ಅದು ಕಂಗಳಲ್ಲಿರುವ ಶಿವಲಿಂಗಕ್ಕೆ ಅರ್ಪಿತವಾಗಿ ಅದರ ಸೊಗಸು ಸಾಧಕನಿಗೆ ಪ್ರಸಾದ ರೂಪದಲ್ಲಿ ಸಿಗುತ್ತದೆ. ಈ ರೀತಿಯ ಪಂಚೇಂದ್ರಿಯಗಳ ಪ್ರತಿಯೊಂದು ಕಾರ್ಯ ಅವುಗಳಲ್ಲಿರುವ ಲಿಂಗಗಳಿಗೆ ಅರ್ಪಿತವಾಗಿ ಬಳಸಿ ಬ್ರಹ್ಮಚಾರಿಯಾಗುತ್ತಾನೆ.

**ಪ್ರಸಾದದ ಪರಿಣಾಮ :** ಏಕಾದಶ ಪ್ರಸಾದಗಳಿಂದ ಉಂಟಾಗುವ ಪರಿಣಾಮದ ಬಗೆಗೂ ವಚನಗಳಲ್ಲಿ ಉಲ್ಲೇಖವಿದೆ.

ಶುದ್ಧ ಪ್ರಸಾದವು ತನುವಿಗೆ ಸಂಬಂಧಪಟ್ಟದ್ದರಿಂದ ತನು ವಿಚಾರಗಳು ಅಳಿಯುವುವು. ಸಿದ್ಧ ಪ್ರಸಾದವು ಮನಸ್ಸಿಗೆ ಸಂಬಂಧಿಸಿದ್ದರಿಂದ ಮನಸ್ಸಿನ ವಿಕಾರಗಳು ದೂರವಾಗುವುವು. ಪ್ರಸಿದ್ಧ ಪ್ರಸಾದದಿಂದ ದುರಾಶೆಗಳು ಅಡಗುವವು. ಸಮಯ ಪ್ರಸಾದದಿಂದ ವಿಷಯಗಳು ಲಿಂಗ ವಿಷಯಗಳಾಗುವವು. ಪಂಚೇಂದ್ರಿಯ ವಿರಹಿತ ಪ್ರಸಾದದಿಂದ ಮನುಷ್ಯನ ಇಂದ್ರಿಯಗಳು ಲಿಂಗೇಂದ್ರೀಯಗಳಾಗುವವು. ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದದಿಂದ ಕರಣಗಳು, ಸಮತಾ ಪ್ರಸಾದದಿಂದ ಅಂತರಂಗದ ಒಲವುಗಳು, ಸದ್ಭಾವ ಪ್ರಸಾದದಿಂದ ಭಾವವು, ಜ್ಞಾನ ಪ್ರಸಾದ ದಿಂದ ಜ್ಞಾನವು ಶುದ್ಧವಾಗುವವು. ಹೀಗೆ ಪ್ರಸಾದಿಗಳು ಸರ್ವಸಂಗ ಪರಿತ್ಯಾಗರಾಗಿ ಬಯಲಲ್ಲಿ ಬಯಲಾಗುವರು. ದೇಹಕ್ಕೆ ಬರುವ ರೋಗವನ್ನು ಔಷಧಿ ಕಳೆದಂತೆ ಭವರೋಗವನ್ನು ಪ್ರಸಾದ ನೀಗುತ್ತದೆ. ಪ್ರಸಾದ ತತ್ವದಲ್ಲಿ ವ್ಯಕ್ತಿ ಮತ್ತು ಸಮಾಜಗಳೆರಡರ ಉದ್ಧಾರಕ್ಕೆ ಸಹಾಯಕವಾಗುವ ಸಮನ್ವಯ ಯೋಗ ಅಡಗಿದೆ. ಶರಣರು ಪ್ರಸಾದವನ್ನು ಬೌದ್ಧಿಕ ಜಿಜ್ಞಾಸೆಯಿಂದ ಮಾತ್ರವಲ್ಲದೆ ಆಚರಣೆಯ ಮಾರ್ಗದಿಂದಲೂ ವಿಶ್ಲೇಷಿಸಿದ್ದಾರೆ. ಬಸವಾದಿ ಪ್ರಮಥರು ಆಚರಿಸಿ ನಿರೂಪಿಸಿದ 'ಪ್ರಸಾದತತ್ವ' ಇಂದಿಗೂ ಪ್ರಸ್ತುತವಾಗಿರುವುದಲ್ಲದೆ, ಈ ಬಗೆಗೆ ನಮ್ಮ ಇಂದಿನ ಆರ್ಥಿಕ ಪರಿಸ್ಥಿತಿಯಲ್ಲಿ ಉಳಿಸಿ ಚೆಲ್ಲುವುದನ್ನೇ ದೊಡ್ಡಸ್ತಿಕೆಯನ್ನಾಗಿ ಮಾಡಿಕೊಂಡಿರುವ ಆಡಂಬರದ ಜೀವಿಗಳು ಯೋಚಿಸುವ ಅನಿವಾರ್ಯತೆಯನ್ನು ಒದಗಿಸಿದೆ.





# ಶಿವಯೋಗ ಆಧುನಿಕ ಪರಿಭಾವನೆ

- ಡಾ॥ ವಿ. ಶಿವಾನಂದ

**'ಯೋಗ'** ಆಧುನಿಕ ಪರಿಭಾಷೆಯಲ್ಲಿ ವಿವರಿಸುವುದಾದರೆ ಮನುಷ್ಯನ ಆಂತರಿಕ ಬಾಹ್ಯ ಸಾಧನೆಯ ವಿಭಿನ್ನಾವಸ್ಥೆಗಳಲ್ಲಿ ಒದಗುವ ದ್ವಂದ್ವ, ಸಂಕೀರ್ಣ ಹಾಗೂ ವೈದೃಶ್ಯ ಮೂಲವಾದ ಅನುಭವ ಶ್ರೇಣಿಗಳನ್ನು ಏಕಾಭಿನ್ನವಾದ ಅವಸ್ಥೆಯಲ್ಲಿ ನೆಲೆಗೊಳಿಸುವ ಒಂದು ಉಚ್ಚಸಾಧನ ಮಾರ್ಗವಾಗಿದೆ. ವಿಜ್ಞಾನ, ತಂತ್ರಜ್ಞಾನಗಳಲ್ಲಿ ಆಧುನಿಕ ಮಾನವ ನಡೆಸಿದ ಪ್ರಗತಿ, ಪಾಶ್ಚಾತ್ಯರ ಭೌತವಾದ (Materialism) ಔದ್ಯೋಗೀಕರಣ, ರಾಜಕೀಯ ತತ್ವಸಿದ್ಧಾಂತ ಪ್ರಣಾಲಿಗಳು, ಆಧುನಿಕ ಋಷಿ ಸಂತರ ತಾತ್ವಿಕ ಆಯಾಮಗಳು ಅಣುಶಕ್ತಿ, ಯುದ್ಧಗಳ ಮಧ್ಯದಲ್ಲಿ ಸಹಮೈತ್ರಿ, 'ಒಕ್ಕೂಟ, ವಿಶ್ವಶಾಂತಿಯ ಸ್ಥಾಪನೆಗಾಗಿ ಕಟ್ಟಿಕೊಂಡ ''ಸಂಯುಕ್ತರಾಷ್ಟ್ರ ಸಂಸ್ಥೆ'' ಇದನ್ನು ನೋಡಿದಾಗ ಬಾಹ್ಯಜಗತ್ತಿಗೆ ಯಾವ ನಿಲುಗಡೆಯಲ್ಲೂ ತೃಪ್ತಿ ಸಮಾಧಾನಗಳನ್ನು ಕಾಣದೆ ಇನ್ನಾವುದಕ್ಕೊ ಇಂದಿನ ಮನಸ್ಸು ತುಡಿಯುತ್ತಿರುವಂತೆ ಗೋಚರಿಸುತ್ತದೆ. ಎಲ್ಲ ವೈಷಮ್ಯಗಳನ್ನು, ವಿಭೇದಗಳನ್ನು ಉಚ್ಚಾಟಿಸಿ, ಎಲ್ಲೆಲ್ಲೂ ಸಮತ್ವವನ್ನು, ಮಾನವತಾವಾದವನ್ನು ಕಲ್ಯಾಣಲೋಕವನ್ನು ಕಟ್ಟುತ್ತಿರುವ ಸಾಧಕ ಮನಸ್ಸುಗಳು ಆಧುನಿಕ ಲೋಕಕ್ಕೆ ಮಾರ್ಗದರ್ಶಿಯಾಗಿರುವಂತೆ ಕಾಣುತ್ತದೆ. ಇದನ್ನೇ **'ಆಧುನಿಕ ಶಿವಯೋಗ'** ಎಂದು ಪ್ರತಿಪಾದಿಸುವುದು ಇಲ್ಲಿನ ಉದ್ದೇಶವಾಗಿದೆ.

**ಮ**ನುಷ್ಯ ಚೇತನವನ್ನು ಮೇಲೆತ್ತುವ ಸಾಹಸವನ್ನೇ ನಾವಿಲ್ಲಿ ಕುಂಡಲಿನೀ ಶಕ್ತಿಯನ್ನು ಜಾಗ್ರತಗೊಳಿಸುವುದು ಎಂದು ಹೇಳಬಹುದು. ಹಲವು ಹತ್ತು ಹಂಬಲದಲ್ಲಿ ಹರಿವ ಮನಸ್ಸು ಹಾಗೂ ಅದರಿಂದ ಸಂಭವಿಸುವ ವಿಚ್ಛೇದಕತೆಯಲ್ಲಿ ಯೋಗವಿಲ್ಲ, **''ಸುಯೋಗೋ ಯೋಗ ಇತ್ಯುಕ್ತೇ''** ಎಂದು ಯಾಜ್ಞವಲ್ಕ್ಯ ಹೇಳುವಲ್ಲಿ ಸಾಮಾನ್ಯ ಚಿತ್ತವೃತ್ತಿಗಳನ್ನು ಸಂಸ್ಕರಿಸಿ ಆ ಸಂಸ್ಕರಣಗೊಂಡ ಚಿತ್ತನ್ನು ಮನಕ್ಕೂ, ಮನವನ್ನು ಘನಮನಕ್ಕೂ ಆ ಘಮಮನವನ್ನು ಉನ್ಮನಕ್ಕೂ ಹಂತ ಹಂತವಾಗಿ ಮೇಲೆತ್ತುತ್ತ ನಡೆಯಬೇಕು ಇದೇ ಯೋಗ. ಕರ್ನಾಟಕದ ಶರಣರು ಶಿವಯೋಗಿಗಳು ಇಂತಹ ಅವಸ್ಥೆಯನ್ನು ಹೊಂದಿರುವರು. ಅರವಿಂದರು ಹೇಳುವ **''ಸುಪ್ರಮಾನಸ ಯೋಗ''**ದ ವಿಚಾರಗಳು ಅಷ್ಟು ಹಿಂದೆಯೇ ಶರಣರ ಸಾಧನಮಾರ್ಗದಲ್ಲಿ ಬಹುಸುಲಭವಾಗಿಯೇ ಅಳವಟ್ಟುದನ್ನು ನಾವು ಕಾಣುತ್ತೇವೆ. ಇದಕ್ಕೆ ಹಿನ್ನೆಲೆಯಾಗಿ ವೀರಶೈವ ದರ್ಶನದಲ್ಲಿ ಕಂಡುಬರುವ ವಿಕಾಸಶೀಲವಾದ, ಪ್ರಗತಿಪರವಾದ ಧೋರಣೆಯನ್ನು ನಾವು ತಿಳಿದುಕೊಳ್ಳಬೇಕು.

### *ವಿಕಾಸ ಸಿದ್ಧಾಂತದ ಮೂರು ಮೆಟ್ಟಿಲುಗಳು*

**ಶ**ರೀರಶಾಸ್ತ್ರವನ್ನು ಕುರಿತಂತೆ ಲಮಾರ್ಕ ಮತ್ತು ಡಾರ್ವಿನ್ನರ ವಿಕಾಸ ಸಿದ್ಧಾಂತಗಳು ಪ್ರಾಮುಖ್ಯತೆಯನ್ನು ಪಡೆದಿವೆ. ಅಂಗಾಂಗಗಳ ಉಪಯುಕ್ತತೆ ಹೆಚ್ಚಿದಾಗ ಅದು ವಿಕಾಸಗೊಳ್ಳುತ್ತದೆ. ನಿದರ್ಶನಕ್ಕೆ ಜಿರಾಫೆಯಗೋಣು ಹೆಚ್ಚಿದ್ದು ಇಂತಹ ಒಂದು ವಿಕಾಸವೆನ್ನುತ್ತಾನೆ. ಲಮಾರ್ಕ, ಡಾರ್ವಿನ್ ಹೇಳುವಂತೆ ಬದುಕುವುದಕ್ಕಾಗಿ ನಡೆಸಿದ ನಿರಂತರ ಹೋರಾಟದಲ್ಲಿ ನಿಸರ್ಗ ಆಯ್ಕೆಮಾಡಿದ್ದು ಮಾತ್ರ ಉಳಿಯುತದೆ; ಬೆಳೆಯುತ್ತದೆ. ಇದು ವಿಕಾಸ ಎನ್ನುವುದು ಅವನ ಸಿದ್ಧಾಂತ. ಮಾನವಿಕ ವಿಜ್ಞಾನಿಗಳು ಪ್ರಾಚೀನ ಮಾನವನ ಮೆದುಳು ಆಧುನಿಕ ಕ್ರೊಮ್ಯಾನನವರೆಗೆ ಕಂಡ ವಿಕಾಸವನ್ನು ವಿವರಿಸುತ್ತಾರೆ. ೨-೩ ಮಿಲಿಯ ವರುಷಗಳ ದಕ್ಷಿಣವಾನರ ಮಾನವನ ಮೆದುಳಿನ ಗಾತ್ರ, ೫೦೦ ಮಿಲಿಲೀಟರ್‌ವರೆಗೆ ಹೆಚ್ಚಿಸಿಕೊಂಡ ೧೫೦೦೦ ವರುಷ ಹಿಂದಿನ ನಿಯಾಂಡರ ಥಾಲ ಮನುಷ್ಯ ೧೪೫೦ ಮಿಲಿ ಮೀಟರ್ ಉದ್ದದ ಗಾತ್ರವನ್ನು ಪಡೆದ. ಇವನ ತರುವಾಯದಲ್ಲಿ ಬಂದವನೇ ಕ್ರೋಮಾನ ಮನುಷ್ಯ. ಇವನ ತಲೆ ಇಂದಿನ ಮಾನವನ ತಲೆಗೆ ಭಿನ್ನವೇನೂ ಆಗಿಲ್ಲ. ಆದರೆ ಜೈವಿಕವಲ್ಲದ ಕೆಲವೊಂದು ಸಾಂಸ್ಕೃತಿಕ ಮೌಲ್ಯಗಳಲ್ಲಿ ಎಂದರೆ ನಾಗರಿಕತೆ, ಕೃಷಿ, ಕುಶಲಕಲೆ. ಭಾಷೆ ಈ ಮುಂತಾದವುಗಳ ದೃಷ್ಟಿಯಿಂದ ಆಧುನಿಕ ಮಾನವನ ಪ್ರಗತಿ ಹಿಂದಿನಿಂದ ಭಿನ್ನ ಎಂಬುದು ಒಟ್ಟು ಈ ವಿಕಾಸವಾದದವರ ವಿಚಾರ ಸಿದ್ಧಾಂತ.

**ಮ**ನಃಶಾಸ್ತ್ರೀಯವಾದ ಸ್ತರದಲ್ಲಿ 'ಯೋಗ'ದ ಪರಿಕಲ್ಪನೆ ಹೆಚ್ಚಿದ್ದು ಇನ್ನೊಂದು ವಿಧದ ವಿಕಾಸದ ಮೆಟ್ಟಿಲು, ಯೋಗ ವಿಚಾರಗಳು ಮನೋವೈಜ್ಞಾನಿಕ ವಿಷಯಕ್ಕೇ ಹೆಚ್ಚಿಗೆ ಸಂಬಂಧಿಸಿರುವುದನ್ನಿಲ್ಲಿ ಕಾಣುತ್ತೇವೆ. ಇದರಿಂದಾಗಿ ಮನಸ್ಸಿನ ಏಕಾಗ್ರವನ್ನು ಹೆಚ್ಚಿಸಿಕೊಳ್ಳುವುದಕ್ಕೆ ಮಂತ್ರಯೋಗ ಮುಖ್ಯವೆನಿಸಿತು. ಇಲ್ಲಿಗೆ ಮಾತು ಮಂತ್ರವಾಯಿತು. ಚಿತ್ತವೃತ್ತಿಗಳಲ್ಲಿ ಧಾವಿಸಿ ಹರಿವ ನಾದವನ್ನು ನಿಯಂತ್ರಿಸುವುದಕ್ಕೆ ಲಯಯೋಗ ಕಾರಣವಾಯಿತು. ಶರೀರ ಮತ್ತು ಮನಸ್ಸುಗಳೆರಡರ ಮೇಲೂ ಪ್ರಭುತ್ವ ಸಾಧಿಸುವುದಕ್ಕೆ ಕಠಿಣ ಪರಿಶ್ರಮ ಮೂಲವಾದ ಹಠಯೋಗದಲ್ಲಿ ಸಾಧಕ ಮುಂದುವರೆದ. Power of controlling breath and mind ಇದನ್ನೇ 'ಹಠವಿದ್ಯೆ' ಎನ್ನಲಾಯಿತು. ಇದಕ್ಕೆ ಅಷ್ಟಾಂಗ ಮಾರ್ಗಗಳು ಕಲ್ಪಿತವಾದವು, ಬಹಿಸ್ತರದಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರಗಳು ಅಂತಸ್ತರದಲ್ಲಿ ಧ್ಯಾನ ಧಾರಣ ಸಮಾಧಿಗಳು ಇಲ್ಲಿ ಮುಖ್ಯ ಪರಿಕರಗಳಾದವು. ಶರೀರ, ಮನಗಳೆರಡೂ ವಶವಾದಾಗಲೂ ತನ್ನಲ್ಲಿರುವ ಸುಪ್ತಚೇತನವನ್ನು ಸ್ವಸ್ವರೂಪವನ್ನು ತನಗೆ ಕಾಣಲು ಶಕ್ಯವೆನ್ನಿಸದೇ ಹೋದಾಗ

'ರಾಜಯೋಗ' ಹಿಂದಿನ ಎಲ್ಲ ಯೋಗಗಳ ಮಾರ್ಗದಿಂದ ಭಿನ್ನವಾಗಿ ಅತ್ಯುಚ್ಚವಾದ ಸಾಧನ ಶ್ರೇಣಿ ಎನ್ನಿಸಿಕೊಂಡಿತು. ಇಲ್ಲಿ ಜೀವನ್ಮುಕ್ತಾವಸ್ಥೆ, ಸಹಜಾವಸ್ಥೆ, ತುರೀಯಾವಸ್ಥೆ, ಅಮನಸ್ಕ, ಅದ್ವೈತಾನಂದ ಈ ಕೆಲವು ಅವಸ್ಥೆಗಳನ್ನು ಅವನು ದರ್ಶನ ಮಾಡಿಕೊಂಡ, ಇದು ಸಾಂಪ್ರದಾಯಿಕವಾದ ಹಿಂದೂ ಯೋಗದರ್ಶನ. ಆದರೆ ಒಂದೊಂದು ಮತಪಂಥಗಳು ಕಟ್ಟಿಕೊಂಡ ಯೋಗದ ವಿಚಾರಸರಣಿ ಭಿನ್ನಭಿನ್ನ. ವಿಯೋಗವನ್ನೇ ಯೋಗವೆಂದು ಹೇಳುವ ಸಾಂಖ್ಯರು ಪ್ರಕೃತಿ ಪುರುಷತತ್ವಗಳ ಸಂಖ್ಯೆಯನ್ನು ಹಾಗೂ ಪ್ರಕೃತಿಯಿಂದ ಪುರುಷತತ್ವ ಭಿನ್ನವಾಗುವುದನ್ನು ಹೇಳುತ್ತಾರೆ. ಪಾತಂಜಲಿ ಜೀವ ಆತ್ಮರ ಮಿಲನವನ್ನು ಯೋಗವೆನ್ನುತ್ತಾನೆ. ಗೀತೆ ಸಾಂಖ್ಯರ ವಿಯೋಗವನ್ನೂ ಪಾತಂಜಲಿಯ ಯೋಗವನ್ನೂ ಸಮನ್ವಯಗೊಳಿಸುತ್ತಾ "ಏಕಂ ಸಾಂಖ್ಯಂ ಚಯೋಗಂಚಯಃ ಪಶ್ಯತಿ ಸವಿಶ್ಯತಿ (ಭಗೀ. ೫:೫) ಎಂದು ಸಾರುತ್ತದೆ. ಕೆಲವೊಂದು ನಾಸ್ತಿಕಪಂಥಗಳೆನ್ನಿಸಿರುವ ಬೌದ್ಧ, ಜೈನ, ಚಾರ್ವಾಕ, ಪೂರ್ವ ಮೀಮಾಂಸೆಗಳು ಈಶ್ವರ ತತ್ವವನ್ನು ಒಪ್ಪಿಕೊಳ್ಳದಿದ್ದರೂ ಯೋಗ ಮಾರ್ಗ ವನ್ನು ನಿರಾಕರಿಸಿಲ್ಲ. "ಆಸ್ತಿಕ" – ನಾಸ್ತಿಕ ಭಾವನೆ ಅಧಿದೈವ ವೊಂದರ ಸ್ವರೂಪಕ್ಕೆ ಸಂಬಂಧಿಸಿರದೆ ವೇದಗಳ ಸಮ್ಮತಿ-ಅಸಮ್ಮತಿಗಳ ನೆಲೆಯಲ್ಲಿ ಬೆಳೆದು ಬಂದುದಾಗಿದೆ ಎನ್ನುತ್ತಾರೆ ಡಾ II ಎಸ್. ರಾಧಾಕೃಷ್ಣನ್.

ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಮತ ಪಂಥ ವೈಚಿತ್ರಗಳಲ್ಲಿ ಯೋಗದ ಕಲ್ಪನೆ ಒಂದೊಂದು ರೀತಿಯಲ್ಲಿ ಸ್ಥಾಪಕಗೊಂಡಿದೆ. ಆತ್ಮತತ್ತ್ವದ ಪರಿಕಲ್ಪನೆಯಲ್ಲೇ ವ್ಯತ್ಯಾಸವಾದರೆ ಅದನ್ನು ಸಾಧಿಸವ ಯೋಗವು ಅಷ್ಟೇ ವ್ಯತ್ಯಾಸಗೊಳ್ಳುತ್ತದೆ ಈಚೆಗೆ ಮತೀಯತೆಯಿಂದದೂರಾದ ರಾಜಯೋಗವನ್ನು ಸಾಧಿಸುವ ಈಶ್ವರೀಯ ಪ್ರಜಾಪಿತ ಬ್ರಹ್ಮಕುಮಾರ ಕುಮಾರಿಯರನ್ನು ಸಂದರ್ಶಿಸಿದಾಗ ಅವರು ಹೇಳುವುದರಲ್ಲಿ ಸಹ ಸಂಪ್ರದಾಯ, ಶರಣತೆಯೇ ಕಾಣಸುತ್ತದೆ. ಪರಮಾತ್ಮ ಬೇರೆ, ದೇವಾತ್ಮ ಬೇರೆ (Supreme, and Superman) ಶರೀರ ಜನಿಸಿ ಆತ್ಮದಲ್ಲಿ ಸೇರಿದಾಗ ಮೃತ್ಯು ಆತ್ಮ ಶರೀರದಲ್ಲಿ ಆವಿರ್ಭಸಿದಾಗ ಉಂಟಾಗುವುದು ಜನನ ಆದರೆ ವಿಕಾಸದಲ್ಲಿ ಮನುಷ್ಯ 'ದೇವಾತ್ಮ' ಮಾತ್ರಆಗಬಲ್ಲ. 'ದೇವ'ನೇ ಆದರೂ ಆ ದೇವನು ನಮ್ಮೆಲ್ಲರ ಪಿತ ಅವನೇ ಪ್ರಜಾಪಿತ ಅವನೇ 'ಶಿವ' 'ಶಿವಬಾಬ' ಇದನ್ನು ಸರಳವಾಗಿ ತಿಳಿಸಿ ಮನಸ್ಸನ್ನು ಶಿವಧ್ಯಾನಕ್ಕೆ ನಿಯಂತ್ರಿಸುವುದು ರಾಜಯೋಗ ಶಿಬಿರಗಳ ಉದ್ದೇಶವೆಂಬುದು ಅವರ ಅಭಿಪ್ರಾಯ. ಶಿವನನ್ನೇ 'ಅದಿದೈವ' ವೆಂದು ಹೇಳುವ ಅವರನ್ನು ವೀರಶೈವರು ಮೆಚ್ಚಿದರೂ ಸಹ 'ವೈಚಾರಿಕ ಅನುಸಂಧಾನದಲ್ಲಿ' ಶಿವಯೋಗ ರಾಜಯೋಗದ ಇನ್ನೊಂದು ವಿಕಾಸದ, ಪರಿಪೂರ್ಣವಾದ, ಸಮ ಸಮುಚ್ಚಯ ವಾದ ಸಾಧನಮಾರ್ಗವೆಂಬುದನ್ನು ಅವರು ತಿಳಿದಂತಿಲ್ಲ.

ಶಿವಯೋಗ ಆಚರಣೆಯಲ್ಲಿ ಯಾವುದರಿಂದ ಯಾವುದೂ ಭಿನ್ನವಾಗಿಲ್ಲ, ಮತ್ತು ಅಲ್ಲಿನ ಆಚರಣೆ ಲಂಬಶ್ರೇಣಿ (highorchical order)ಯನ್ನು ಅನುಸರಿಸಿದ್ದಲ್ಲ. ಬೆಟ್ಟ ಬಯಲುಗಳೆರಡೂ ಅಲ್ಲಿ ಅವನಿಗೆ ಒಂದಾಗಿ ಕಾಣುತ್ತವೆ. ಆದರೆ ಬೆಟ್ಟವನ್ನೇರಿದಾಗ ಬಯಲು ಕಾಣುವುದು ಸರಿ. ಹಿಮವತ್ಪರ್ವತದ ಉತ್ತುಂಗ ಗಿರಿಸಾಲುಗಳಲ್ಲಿ ಅವುಗಳ ಶ್ರೇಣಿಯಲ್ಲಿ ಸಮಾಂತರಗಳಲ್ಲಿ ಕಾಣುವ ವ್ಯತ್ಯಾಸ ಸ್ಥೂಲವಾದುದು. ಆದರೆ ಅದಕ್ಕಿರುವ ಬೃಹತ್ತು-ಮಹತ್ತು ಗೋಚರಿಸುವುದು ಅದನ್ನು ಒಟ್ಟಂದದಲ್ಲಿ ಕಂಡಾಗ ಮಾತ್ರ.

*ಶಿವಾರ್ಕಶಕ್ತಿ ಧೀಧಿತ್ಯಾ ಸಮರ್ಥೀಕೃತಚಿದ್ದೃಶಾ ।*
*ಶಿವಂಶಕ್ತ್ಯಾದಿಭಿಸ್ಸಾರ್ಧಂ ಪಶ್ಯತ್ಯಾತ್ಮಗತಾವ್ರತಿಃ ॥ (ನಿಶ್ವಾಸಕಾರಿಕೆ)*

ಪ್ರಭಾಪುಂಜದ ವಿಸ್ಫುರಣಗಳಂತೆ ಆತ್ಮನಲ್ಲಿ ಶಿವ ಶಕ್ತಿಯ ಕಿರಣಗಳು ಪಸರಿಸಿವೆ. ಈ ಕಿರಣಗಳು ಚಿತ್ಕರಣಗಳು ಈ ಚಿತ್ಕಿರಣದ ಹೊಂಬೆಳಗಿನಲ್ಲಿ ಶಕ್ತಿ ಸಮೇತನಾದ ಶಿವನನ್ನು ಕಾಣುವವನೇ ಶಿವಯೋಗಿ. ಇಲ್ಲಿ ಪರಮಾತ್ಮನೇ ಪರವಸ್ತು ಅದರ ಸ್ವಲೀಲಾನಂದದ ಲೀಲಾವಿಲಾಸದಲ್ಲಿ ಜೀವನ ಸೃಷ್ಟಿ. ಅದುವೇ 'ಪಿಂಡ'ವೆನ್ನಿಸಿದೆ. ಇದು ಬದ್ಧವಲ್ಲ, ಶುದ್ಧ ಇಲ್ಲಿ ಶರೀರಶಾಸ್ತ್ರಜ್ಞರು ಹೇಳುವ ಒಂದೊಂದು ಎಡೆಗಳು ಲಿಂಗಾನುಸಂಧಾನದ ಆತ್ಯಂತಿಕ ನಿಲುಗಡೆಗಳು. ಕೆಲವೊಂದು ಚಕ್ರಗಳು ಶರೀರದ ಭಾಗಗಳಲ್ಲಿ ವಿಜ್ಞಾನಿಗಳು ಗುರುತಿಸಿದ್ದಾರೆ.

೧. ಆಧಾರ – **Sacral plexus**
೨. ಸ್ವಾಧಿಷ್ಠಾನ – **Prostatic**
೩. ಮಣಿಪುರ – **Epigastric**
೪. ಅನಾಹತ – **Cardial**
೫. ವಿಶುದ್ಧಿ – **Pharyngal**
೬. ಆಜ್ಞಾ – **Cavernous**

ಇವು. ಪಾರಂಪರಿಕ ಯೋಗಗಳಲ್ಲಿ ಗುರುತಿಸಿರುವ ಷಟ್ಚಕ್ರಗಳು, ಆದರೆ ಶಿವಯೋಗ ಸಾಧನೆಯಲ್ಲಿ ಇವಕ್ಕೂ ಮುಂದಿರುವ ಚಕ್ರಗಳ ಶೋಧನೆಯಿದೆ. ಸಮಸ್ತ ಶಕ್ತಿಗಳ ಕೇಂದ್ರಸ್ಥಾನ ಅಣುಚಕ್ರ, ಅದರಲ್ಲಿ ಸಹಸ್ರಾರ, ಶಿಖಾ ಮತ್ತು ಪಶ್ಚಿಮ ಚಕ್ರಗಳು ಒಂದೊಂದರಲ್ಲಿ ಒಂದೊಂದು ಅಡಗಿಕೊಂಡಿವೆ; ಶಿರದ ಹಿಂಭಾಗದಲ್ಲಿರುವ ಬ್ರಹ್ಮರಂಧ್ರವೇ ಸಹಸ್ರಾರಚಕ್ರ. Posterior lobe in brain ಶಿಖಾಚಕ್ರವೆಂಬುದು ಶಿರದ ಮೂರುಭಾಗ (Penial gland) ಶಿರಮಧ್ಯವೇ ಪಶ್ಚಿಮಚಕ್ರ ಇವು ಕೇವಲ ಚಕ್ರಗಳಲ್ಲ ದ್ರಷ್ಟಾರರು ಕಂಡುಕೊಂಡ ಒಂದೊಂದು ದೃಷ್ಟಿ ಸಂಕೇತಗಳು.

*ಸಮದೃಷ್ಟಿರ್ ಬ್ರಹ್ಮಚಕ್ರಂ ಊರ್ಧ್ವದೃಷ್ಟಿ 'ಶಿಖಾಮಯಂ*
*ಪಶ್ಚಿಮಂ ನೇತ್ರಮೂಲಾಂತಂ ಚಕ್ರತ್ರಯಮಿದಂ ಶ್ರುಣು;*

ಶಿವಯೋಗದಲ್ಲಿ ನೇತ್ರ ಮೂಲದ ಈ ದಿವ್ಯಶಕ್ತಿಯನ್ನು ಸಮದೃಷ್ಟಿಯಾಗಿ ಪಡೆದು ಇದನ್ನು ಊರ್ದ್ವೋರ್ಧ್ವವಾಗಿ





ಕಾಣಿಸಲಾಗುತ್ತದೆ. ಇದು ವ್ಯಕ್ತಿ ಪಡೆಯುವ ಅಪೂರ್ವವಾದ ಆಧ್ಯಾತ್ಮಿಕ ಸಿದ್ಧಿ. ದಾರ್ಶನಿಕ ಅನುಭೂತಿ. ಆದುದರಿಂದಲೇ ಶಿವಯೋಗಕ್ಕೆ ಲಕ್ಷ್ಯ ಇತರ ಯೋಗದಲ್ಲಿ ಕಾಣುವ 'ಮನ'ವಲ್ಲ. ಅಲ್ಲಿನ ಆತ್ಯಂತಿಕ ಗುರಿ ಲಕ್ಷ್ಯ ಲಿಂಗ. ಈ ಲಿಂಗದಿಂದಾದುದು ಅಂಗ. 'ಲಿಂಗದಲ್ಲಿ ಉದಯಿಸಿ ಅಂಗವಿಡಿದವರನೇನೆಂಬೆ? ಎಂದೊಬ್ಬ ವಚನಕಾರ ವಿಡಂಬಿಸುತ್ತಾನೆ. ಅಂಗನ ಆಧ್ಯಾತ್ಮಿಕ ಯಾತ್ರೆಯಲ್ಲಿ' ಶಿವಯೋಗಿಗೆ ಗೋಚರಿಸುವ ಸೃಷ್ಟಿಯೆಲ್ಲವೂ ಶಿವಮಯ. ಅವನಿಗೆ ಭೌತಿಕವಾದ ಯಾವ ಇಂದ್ರಿಯಗಳೂ ಮುಖ್ಯವೆನಿಸುವುದಿಲ್ಲ. ಅಲ್ಲಿನ ಲೋಕವೊಂದು ವಿಸ್ಮಯಗಳ ಖನಿ. ಆಧುನಿಕ ಅಸಂಗತಸಾಹಿತ್ಯ (Observed literature) ಲೌಕಿಕ ಅಸಂಗತಿಗಳನ್ನು ಮಾತ್ರ ಎದ್ದು ಕಾಣಿಸುವುದಾಗಿದ್ದರೆ ಅಸಂಗತಿಗಳೆಲ್ಲವನ್ನು ಒಂದು ಅಧಿನಿಯಂತ್ರಣ ಶಕ್ತಿಗೆ ಒಳಪಡಿಸಿದಾಗ ಅಲ್ಲಿನ ಅಸಂಗತಿಯೆಂಬುದೂ ಸಹ ಸುಸಂಗತವಾಗಿ ತೋರುತ್ತದೆ. ಶಿವಯೋಗಾನುಭವದ ಕೆಲವೊಂದು ಬೆಡಗಿನ ವಚನಗಳ ಶೈಲಿಯ ಹಿನ್ನೆಲೆಯಲ್ಲಿ ಇಂದಿನ ಅಸಂಗತ ಸಾಹಿತ್ಯದ ಮೂಲವನ್ನು ನಾವು ಕಂಡುಕೊಳ್ಳಬಹುದು.

(i) *ಕಾಲಲ್ಲಿ ಕಣ್ಣು ಮೂಡಿತ್ತ ಕಂಡೆ*
*ನೆತ್ತಿಯ ಕುಂಭವನೊಡೆದು ಸುಧೆ*
*ಸರ್ವಾಂಗದಲ್ಲಿ ತಂಬಿತ್ತ ಕಂಡೆ*
*ಕತ್ತಲೆ ಬೆಳಗಾಯಿತ್ತ ಕಂಡು ಬೆರಗಾದೆನಯ್ಯ ಅಖಂಡೇಶ್ವರಾ*
*(ಪ್ರಾ. ಲಿಂ. ಸ್ಥ. ೯೪)*

(ii) *ಕಾಲಿಲ್ಲದೆ ನಡೆಯಬಲ್ಲರೆ ಶಿವಯೋಗಿಯೆಂಬೆನಯ್ಯ*
*ಕೈಯಿಲ್ಲದೆ ಮುಟ್ಟಬಲ್ಲರೆ ಶಿವಯೋಗಿಯೆಂಬೆನಯ್ಯ*

ಎಂಬುದೂ ಸಹ ಮೇಲಿನ ವಚನ ಕರ್ತೃ ಷಣ್ಮುಖ ಶಿವಯೋಗಿಯದೇ ಆದ ಇನ್ನೊಂದು ವಿಧದ ನಿರೂಪಣೆ. ಹರಿಹರ ಮಹಾಕವಿಯ ಶಿವಯೋಗಾನುಭೂತಿ ಇನ್ನು ತೀವ್ರ ತರವಾದುದು. ಅಲ್ಲದೆ ಅಲ್ಲಿ ಕಾಣುವ ಐಂದ್ರಿಕಜಗತ್ತು ಆಧ್ಯಾತ್ಮಿಕ ಜಗತ್ತಿನೊಡನೆ ಸ್ಪಂದಿಸುವಾಗ ಎಲ್ಲ ಲೌಕಿಕ ಇಂದ್ರಿಯಗಳಿಗೂ ದಿವ್ಯಸಂಸ್ಕಾರ ಘಟಿಸಿದೆ. ಇಲ್ಲಿ ಅತೀಂದ್ರಯವಾದ ದಿವ್ಯಶಕ್ತಿ ಮೊದಲು ಚಿತ್ತ ಬುದ್ಧಿ ಮನಸ್ಸುಗಳನ್ನು ಶುಚಿಗೊಳಿಸಿದಾಗಲೇ ಕರ್ಮೇಂದ್ರಿಯಗಳು ಮುಖ್ಯಯಂತ್ರವೆಂದರೆ ಅಧೀನವಾಗಿ ಆದು ಹೇಳುವುದರ ಮೊದಲೇ ತನ್ನ ಕರ್ತವ್ಯವನ್ನು ಮುಗಿಸಿಬಿಟ್ಟಿರುತ್ತದೆ. ಹರಿಹರ ಕವಿ ಪುಷ್ಪಗಳನ್ನು ಕಂಡಾಗ ಅದರ ಗಂಧತೀಡುವ ಮೊದಲೇ. ಅದನ್ನು ಶಿವಗರ್ಪಿಸುವುದರ ಅನುಭವವನ್ನು ನಿರೂಪಿಸುತ್ತಾನೆ.

*ಮನದಿಂದೆ ಕೈಕೊಳ್ವ ಮುನ್ನವೀಗಂಧಮಂ*
*ನಿನಗೆ ಬಳಕೀವೆನುತ್ತಮ ಕುಸುಮ ವೃಂದಮಂ । (ಪು.ರ.)*

'ಅತ್ಮಾನಾಂ ರಥಿನಂ ವಿದ್ಧಿ : ಶರೀರಃ ರಥಮೇವಚ ಇಂದ್ರಿಯಾಗಿ ಪ್ರಗ್ರಂ ಅಹೊ' ಎನ್ನಿಸಿದಾಗ ಇಂದ್ರಿಯ ಮುಖೇನವಾಗುವ ಎಲ್ಲ ಕೆಲಸಕಾರ್ಯಗಳಿಗೂ ಮಹತ್ವ ದೊರಕುತ್ತದೆ.

'ಶಿವಯೋಗಿ' ಅರವಿಂದರು life Devineದಲ್ಲಿ ಹೇಳಿರುವ 'ವಿಜ್ಞಾನಮಯ ಜೀವಿ'ಯ ಪ್ರತೀಕವಾಗಿದ್ದಾನೆಂಬುದಕ್ಕೆ ಅವರು ಕೊಟ್ಟಿರುವ ವಿಜ್ಞಾನಮಯ ಜೀವಿಯ ಗುಣಲಕ್ಷಣಗಳನ್ನು ನಾವಿಲ್ಲಿ ಉಲ್ಲೇಖಿಸಬಹುದು.

. 'He (gnostic being) would feel the presence of devine every centre of his conciousness in every Vibration to hislife force. in every cell of his body. I this conciovsness he would like and act in an entire trancendent freedom, a complete Joy of the spirit an entire Identity with the cosmisself'.

ಯಾರು ತನ್ನ ಆತ್ಮ ಚೈತನ್ಯದ ಚಿದಂಶವನ್ನು ಮಹದಂಶವನ್ನು ಗುರಿತಿಸಲಾರರೋ ಅವರು ಮತ್ತೊಂದು ಆತ್ಮದಲ್ಲಿ ಆ ಚಿದ್ವಭೂತಿಯ ಗುಣಲಕ್ಷಣಗಳೆರಡನ್ನೂ ಕಾಣಲಾರರು. "ಶಿವಯೋಗ" ಎನ್ನುವುದು ಆಧುನಿಕ ಕಾಲದಲ್ಲಿ ನಾವು ಜಾಗ್ರತಗೊಳಿಸಬೇಕಾಗಿರುವ ಒಂದು ವಿಶ್ವಾತ್ಮ ದೃಷ್ಟಿ. ಇದರಿಂದ ವಿಶ್ವಮಾನವತಾವಾದದ ಸಾಕ್ಷಾತ್ಕಾರ ಸಾಧ್ಯ, ಅಲ್ಲಿಗೆ ಸೃಷ್ಟಿಯನ್ನು ನಾವು ಶಿವಮಯವಾಗಿಸಬಹುದು, ಇಂದಿನ ಎಲ್ಲ ವಿಫಲತೆಗಳಿಗೆ ಆ ದೃಷ್ಟಿಯ ಅಭಾವವೇ ಕಾರಣ. ಜಾತೀಯ ಭೇದ, ಮತಭೇದ ಪ್ರಾಂತಭೇದ ಬಲಾಢ್ಯ ರಾಷ್ಟ್ರಗಳು, ಬಲಹೀನ ರಾಷ್ಟ್ರಗಳು ಇವುಗಳ ಅಹಮಹಿಮಿಕೆಗಳಿಂದ ಕಡೆಗಾಗಬಹುದು. ಬಡವ ಬಲ್ಲಿದರಲ್ಲಿ ಭೇದಕಾಣದ ಉತ್ತಮ ಸಮಾಜವಾದವನ್ನು ಸಾಧಿಸಿ ತೋರಬಹುದು. ವಿಜ್ಞಾನ ಸಾಧಿಸಿದ ಪ್ರಗತಿ ನೂರುಮುಖದ್ದಿರಬಹುದು. ಆದರೆ ಆ ವೈಜ್ಞಾನಿಕವಾದ ಸೃಷ್ಟಿ ಶಿವಮಯವಾಗದಿದ್ದರೆ ಮತ್ತೊಂದು ಮಹಾಯುದ್ಧವನ್ನು ನಾವು ಎದುರಿಸಬೇಕಾಗಿ ಬರುತ್ತದೆ. ವಿಷಮತೆ, ವಿಫಲತೆಗಳು ಅಸಮಾನತೆ ಅಶಾಂತಿ, ಅನಾರೋಗ್ಯ, ಅವಿದ್ಯೆ, ತಾಂಡವ ವಾಡುವ ಕಡೆಗಳಲ್ಲಿ 'ಶಿವಯೋಗ ಶಿಬಿರ'ಗಳನ್ನು ನಡೆಸುವ 'ಶಿವಯೋಗಧಾಮ'ಗಳನ್ನು ಕಟ್ಟುವ ರಚನಾತ್ಮಕ ಕೆಲಸಕಾರ್ಯಗಳ ಮೂಲಕ ವೀರಶೈವರು ಆಧುನಿಕ ಪರಿಸರದಲ್ಲಿ ಇಲ್ಲಿನ ಮೌಲ್ಯಗಳನ್ನು ಉಳಿಸಿಕೊಳ್ಳಲು ಸಾಧ್ಯ. ಬಸವಣ್ಣ ಭಕ್ತಿಯೋಗದಲ್ಲಿ ಚೆನ್ನಬಸವಣ್ಣ ಜ್ಞಾನಯೋಗದಲ್ಲಿ ಸಿದ್ಧರಾಮ ಕರ್ಮಯೋಗದಲ್ಲಿ ಕಾಣಿಸಿರುವ ಪರಿಣತಿ "ಶಿವಯೋಗ" ದಲ್ಲಿ ಅವರು ಪಡೆದ ಒಂದೊಂದು ಮುಖದ ಸಿರಿಯ ಪರಿಣತಿಯಿಲ್ಲದೆ ಇವಾವೂ ಶಿವಯೋಗದಿಂದ ಭಿನ್ನವಾಗಿನಿಂತ ಆಚರಣೆಗಳೆಲ್ಲ. ಇಂದು ಅದೇ ಮೌಲ್ಯವನ್ನು "ಸಮಾಜವಾದ" ಮಾನವತಾವಾದಗಳಿಗೆ ಅನ್ವಯಿಸಿಕೊಂಡು ಶಿವಯೋಗ ಆಚರಣೆಯನ್ನು ನಿತ್ಯಜೀವನದಲ್ಲಿ ಅಳವಡಿಸಿ ಕೊಳ್ಳಬಹುದು. ಇದರಿಂದ ಆಧುನಿಕ ವಿಕಾಸ ಪಥದಲ್ಲಿ "ಶಿವಯೋಗ"ಒಂದು ಉನ್ನತ ಮೆಟ್ಟಿಲಾಗುವುದರಲ್ಲಿ ಸಂದೇಹವಿಲ್ಲ.

*(ಕೃಪೆ : ಮಹಾಂತ)*

# ಶೈಕ್ಷಣಿಕ ಮಾರ್ಗದರ್ಶನ

– ಕೆ.ಎಸ್. ಸಮೀರಸಿಂಹ
ರೀಡರ್, ವಿಜಯ ಟೀಚರ್ಸ್‌ಕಾಲೇಜು
ಜಯನಗರ, ಬೆಂಗಳೂರು – ೫೬೦ ೦೦೪.

ಮನುಷ್ಯನ ಅವಶ್ಯಕತೆಗಳು ಅನೇಕ. ಬೇರೆಲ್ಲಾ ಪ್ರಾಣಿಗಳಿಗಿಂತ ಮನುಷ್ಯಪ್ರಾಣಿಯ ಅವಶ್ಯಕತೆಯು ಅವುಗಳ ಪೂರೈಕೆಯೊಂದಿಗೆ ಹೆಚ್ಚುತ್ತಾ ಹೋಗುತ್ತದೆ. ಮಾನವನ ವಿಭಿನ್ನವಾದ ವರ್ತನೆಗೆ ಅವನ ಅವಶ್ಯಕತೆಗಳು ಮತ್ತು ಅವುಗಳಿಂದ ಬೋಧನೆಯಾದ ಅಭಿಪ್ರೇರಣೆಗಳೇ ಕಾರಣ. ಬೇರೆ ಪ್ರಾಣಿಗಳಿಗಿರುವಂತೆ ಹಸಿವು, ಬಾಯಾರಿಕೆ, ನಿದ್ದೆ, ವಿಶ್ರಾಂತಿಗಳನ್ನು ಅಪೇಕ್ಷಿಸುವ ಮೂಲಪ್ರವೃತ್ತಿಯಲ್ಲದೆ ಮಾನವನಿಗೆ ಅವನದೇ ಆದ ಕೆಲವು ಪ್ರವೃತ್ತಿಗಳಿವೆ. ಅವು ಕೇವಲ ಮಾನವನಿಗೆ ತನ್ನಲ್ಲಿರುವ ಚಿಂತಿಸುವ ಸಾಮಗ್ರಿ ತಂದ ಕೊಡುಗೆ ಎಂದೇ ಹೇಳಿ ಮುಗಿಸಬಹುದೆ ಎಂಬ ಸಂದೇಹ ಬರುತ್ತದೆ. ಒಟ್ಟಿಗೆ ಆಡುತ್ತಾ ಬೆಳೆಯುತ್ತಿರುವ ಒಂದು ಗುಂಪಿನಲ್ಲಿರುವ ಶಾಲಾಮಕ್ಕಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಅವರಲ್ಲಿ ಪ್ರತಿಯೊಬ್ಬರಿಗೂ ತಮ್ಮದೇ ಆದ ಸ್ವಭಾವಗಳಿರುವುದನ್ನು ನಾವು ಕಾಣಬಹುದು. ಅವರ ಆಸೆ ಆಕಾಂಕ್ಷೆಗಳು, ಸಾಮರ್ಥ್ಯಗಳು ವಿಭಿನ್ನವಾಗಿದ್ದರೂ ಒಟ್ಟಿಗೆ ಕುಣಿದು ಕುಪ್ಪಳಿಸುವುದನ್ನು ಕಂಡಿದ್ದೇವೆ. ತಮ್ಮ ತಮ್ಮಲ್ಲೇ ಜಗಳ, ಕದನಗಳಾದರೂ ಕೆಲವೇ ಗಳಿಗೆಗಳಲ್ಲಿ ಪುನಃ ಒಂದಾಗುವ ಪ್ರವೃತ್ತಿಯನ್ನು ಸಹಾ ನೋಡಿದ್ದೇವೆ. ಮಕ್ಕಳು ಸೋಲು ಗೆಲವುಗಳನ್ನು ಅನುಭವಿಸಿದರೂ, ಚಂಡಿ ಪ್ರವೃತ್ತಿಯನ್ನು ಹೊಂದಿದ್ದರೂ, ಇತರರ ಸ್ನೇಹ ಅಪೇಕ್ಷಿಸುವರು. ತನ್ನ ಸ್ನೇಹಿತ ಹೆಚ್ಚು ಅಂಕಗಳನ್ನು ಪಡೆದರೂ ತಾನೂ ಪಡೆಯಲು ಸಾಧ್ಯವಾಗದಿದ್ದರೂ ಅವನ ಸ್ನೇಹವನ್ನು ಮಾತ್ರ ಬಿಟ್ಟುಕೊಡದ ಪುಟಾಣಿಮಕ್ಕಳನ್ನು ಶಾಲೆಗಳಲ್ಲಿ ನೋಡಿದ್ದೇವೆ. ಒಬ್ಬನು ವಾಚಾಳಿಯಾದರೆ ಮತ್ತೊಬ್ಬನು ಮುದ್ದಾಗಿ ಬರೆಯುವುದನ್ನು, ಮಗದೊಬ್ಬನು ಓಟದಲ್ಲಿ ಮೊದಲಿಗನಾಗುವ ಸಂದರ್ಭಗಳು ಪ್ರತಿಶಾಲೆಯಲ್ಲೂ ಸರ್ವೇಸಾಮಾನ್ಯ. ಈ ಎಲ್ಲಾ ಅಂಶಗಳೂ ಪ್ರತಿ 'ಮಗುವು ತನ್ನದೇ ಆದ ವಿಶೇಷತೆಯನ್ನು ಹೊಂದಿರುವ ವ್ಯಕ್ತಿತ್ವ' ಎನ್ನುವುದನ್ನು ಸಾರುತ್ತವೆ. ಮಕ್ಕಳಲ್ಲಿ ಅನೇಕ ಸಾಮಾನ್ಯ ಗುಣಗಳನ್ನು ಕಂಡರೂ ವಿಭಿನ್ನವಾದ ಲಕ್ಷಣಗಳೇ ಹೆಚ್ಚು. ಹೆಚ್ಚು ವಿಭಿನ್ನತೆಗಳನ್ನು ಪರಿಗಣಿಸಿದರೆ ಸಾಮಾನ್ಯ ಸಾಮರ್ಥ್ಯಗಳಿಗೆ ಮಾತ್ರ ಪೋಷಣೆ ಕೊಡುವ ಯೋಜನೆಯೇ ಶಾಲಾ ಕಾಲೇಜುಗಳ ಕಾರ್ಯಕ್ರಮ ಎಂದು ಹೇಳುವುದು ತಪ್ಪು ಎಂದು ನನಗನಿಸುತ್ತದೆ.

ಇಂತಹ ಶೈಕ್ಷಣಿಕ ಪರಿಸ್ಥಿತಿಯಲ್ಲಿ ಪ್ರತಿ ವಿದ್ಯಾರ್ಥಿ/ವಿದ್ಯಾರ್ಥಿನಿಯೂ ಒಂದು ಅನನ್ಯವಾದ ವ್ಯಕ್ತಿತ್ವ ಎನ್ನುವುದನ್ನು ಅರಿಯದೇ ಸಂರಚಿಸಲ್ಪಟ್ಟಿರುವ ಶೈಕ್ಷಣಿಕ ಕಾರ್ಯಕ್ರಮವು ವಿದ್ಯಾಭಿಲಾಷಿಗಳು ತಮ್ಮ ಮೇಲೆ ತಾವೇ ಇಡಬೇಕಾದ ನಂಬಿಕೆಯನ್ನು ಹಾಳು ಮಾಡುತ್ತದೆ. ಪ್ರತಿ ವಿದ್ಯಾಭಿಲಾಷಿಗೂ ತನ್ನ ಗುರಿಯತ್ತ ಸಾಗುವ ಅಭಿಲಾಷೆ ಇರುವುದು ಸಹಜ. ಆದರೆ ತಾನೆ ನಿರೂಪಿಸಿಕೊಂಡ ಗುರಿಯು ನೈಜವಾಗಿರಬೇಕು. ತನ್ನ ಸಾಮರ್ಥ್ಯವನ್ನು ಅರಿತು ಅದಕ್ಕನುಗುಣವಾಗಿ ನಿರೂಪಿಸಲ್ಪಟ್ಟ ಗುರಿಯೇ ನೈಜವಾದುದು. ಅಂತಹ ಗುರಿ ಸಾಧನೆಯೇ 'ಜಯ'. ನಿರೂಪಿಸಲ್ಪಟ್ಟ ಗುರಿಯನ್ನು ತಲುಪಲು ಬೇಕಾಗಿರುವ ಸಾಮರ್ಥ್ಯದ ಅರಿವು ಆತನಿಗೆ ಇರಬೇಕು. ಆ ಸಾಮರ್ಥ್ಯದ ಬೆಳವಣಿಗೆಗಾಗಿ ಆರಿಸಿಕೊಂಡ ಸಾಧನೆಯ ಹಾದಿಯೇ ವಿದ್ಯಾಭ್ಯಾಸ ಕ್ರಮ. ಹೀಗೆ ಪರಿಶ್ರಮಿಸಿದ ವಿದ್ಯಾಭಿಲಾಷಿ ತನ್ನ ಗುರಿಯತ್ತ ಸಾಗಿ ವಿಜಯಿಯಾಗಬಲ್ಲ. ಇಂತಹ ವಿದ್ಯಾರ್ಥಿ(ನಿ)ಗೆ ಜೀವನ ಸ್ವರ್ಗವಾಗಬಲ್ಲದು. ಆದರೆ, ತನ್ನ ಸಾಮರ್ಥ್ಯವನ್ನು ಅರಿಯದೆ ಮಿಥ್ಯವಾದ ಒಂದು ಗುರಿಯನ್ನು ಮರೀಚಿಕೆಗೊಳಿಸುವ ಯುವಕ/ಯುವತಿಯರ ಸಂಖ್ಯೆ ಅತಿ ಹೆಚ್ಚು ಎಂದು ಹೇಳಬೇಕಾಗಿಲ್ಲ.

ಸಾಮರ್ಥ್ಯಕ್ಕನುಗುಣವಾದ ಗುರಿಯನ್ನು ನಿರೂಪಿಸಿರುವುದು ಅಥವಾ ಗುರಿಗೆ ತಕ್ಕುದಾದ ಸಾಮರ್ಥ್ಯವನ್ನು ತಮ್ಮ ವಿದ್ಯಾರ್ಥಿಗಳಲ್ಲಿ ಬೆಳೆಸಬಲ್ಲ ಕಾರ್ಯಕ್ರಮವು ವಿದ್ಯಾರ್ಥಿ ಜೀವನವನ್ನು ಸುಖಮಯ ಮಾಡಬಲ್ಲದು. ಗೆಲುವು ಗೆಲುವಿನತ್ತ ನುಗ್ಗಿಸುತ್ತದೆ. ಆದರೆ ಪ್ರಸ್ತುತ ಪರಿಸ್ಥಿತಿಯನ್ನು ಗಮನಿಸಿದಾಗ ಕಂಡು ಬರುವುದಾದರೂ ಏನು? ಮಿಥ್ಯವಾದ ಗುರಿ, ಸಾಮರ್ಥ್ಯದ ಕೊರತೆ, ಗುರಿ-ಸಾಮರ್ಥ್ಯಗಳ ನಡುವೆ ಸಂಬಂಧವಿಲ್ಲದೆ ರೂಪಿಸಲ್ಪಟ್ಟ, ವಿದ್ಯಾಭ್ಯಾಸಕ್ರಮ. ಇದರಿಂದ ಆಗಬಹುದಾದರೂ ಏನು?

ಹೀಗಾದಾಗ ಪರಿಸ್ಥಿತಿಯನ್ನು ಊಹಿಸುವುದು ಒಳ್ಳೆಯದು. ನೈಜವಾದ, ತನಗೆ ತಕ್ಕುದಾದ ಗುರಿ ನಿರೂಪಿಸಿಕೊಳ್ಳುವ ಪ್ರವೃತ್ತಿಯನ್ನು ಮಕ್ಕಳಲ್ಲಿ ಬೆಳೆಸಬೇಕು. ಸಾಮರ್ಥ್ಯದ ಬೆಳವಣಿಗೆ ಕುಂಠಿತವಾದಾಗ ಗುರಿಯನ್ನೇ ಅದಕ್ಕನುಗುಣವಾಗಿ ಬದಲಾಯಿಸಿಕೊಳ್ಳುವ ಪ್ರವೃತ್ತಿಯನ್ನು ಹೊಂದಿರುವ ವ್ಯಕ್ತಿಯೇ ಸದಾ ಜಯವನ್ನು ಅನುಭವಿಸುವ ಪ್ರತಿಭಾವಂತ. ಈ ಒಂದು ಪ್ರತಿಕ್ರಿಯೆಯು





ಮಗುವಿನ ಬೆಳವಣಿಗೆಯಲ್ಲಿ ನಿರಂತರವಾಗಿ ನಡೆಯುತ್ತಿರಬೇಕು. ಇದನ್ನೇ ಹೊಂದಾಣಿಕೆ ಎನ್ನುವುದು. ಹೊಂದಾಣಿಕೆಯ ಮಂತ್ರವನ್ನು ಅರಿತಿರುವವನೇ(ಳೇ) ಸದಾ ಜಯಶಾಲಿ. ಹೊಂದಾಣಿಕೆಯ ಸೂತ್ರವನ್ನು ಯಾರು ಕಲಿತಿದ್ದಾರೋ ಅವರ ಮಾನಸಿಕ ಸ್ಥೈರ್ಯ ಹೆಚ್ಚು. ವಿಜಯಶಾಲಿಗಳಾದ ಅನೇಕ ಪ್ರತಿಭಾವಂತರ ಜೀವನವನ್ನು ಗಮನಿಸಿದ್ದೇ ಆದರೆ ಇವರ ಸತ್ಯಾಸತ್ಯತೆಯ ಅರಿವಾಗುತ್ತದೆ.

ತಂಡೂಲ್ಕರ್‌ನಂತಹ ವಿಜಯಶಾಲಿ ಯುವಕನ ವಿಜಯದ ಹಾದಿಯನ್ನು ಗಮನಿಸಿ. ಆತನು ''ನಾನು ನೂರು ಹೊಡೆಯುತ್ತೇನೆ'' ಎಂಬ ಗುರಿಯನ್ನು ನೈಜವಾಗಿ ತನ್ನ ಸಾಮರ್ಥ್ಯದ ಮೇಲಿನ ನಂಬಿಕೆಯಿಂದಷ್ಟೆ ನಿರೂಪಿಸಿಕೊಳ್ಳುವ ಪ್ರವೃತ್ತಿಯನ್ನು ಹೊಂದಿದ್ದಾನೆ. ತನಗೆ ಶತಕವನ್ನು ಹೊಡೆಯಲು ಬೇಕಾದ ಅವಧಾನ, ಶಕ್ತಿ, ತಾಂತ್ರಿಕತೆ, ಮನೋದಾರ್ಢ್ಯ, ಆರೋಗ್ಯ ಹಾಗೂ ಚಾಕಚಕ್ಯತೆಗಳನ್ನು ನಿರಂತರವಾದ ಅಭ್ಯಾಸದಿಂದ ಬೆಳೆಸಿಟ್ಟುಕೊಂಡಿರುತ್ತಾನೆ. ಇದೇ ವಿಜಯದ ಹಾದಿ. ಇದರ ಸಾಧನೆಯೇ ವಿಜಯ. ಎಂದರೆ ನಿರಂತರವಾದ ಶ್ರಮ ಸಾಮರ್ಥ್ಯದ ಬೆಳವಣಿಗೆಗೆ ದಾರಿ.

ಅನೇಕ ಮಕ್ಕಳು ಮತ್ತು ಯುವಕ-ಯುವತಿಯರು ತಮ್ಮ ಶಾಲಾ-ಕಾಲೇಜುಗಳ ಕೆಲಸದಲ್ಲಿ ಜಯಶೀಲರಾಗಬೇಕೆಂದೇ ಇಚ್ಛಿಸುತ್ತಾರೆ. ತಮ್ಮ ಇಚ್ಛೆಯಂತೆ ಕೆಲಸ ಮಾಡುವಂತಹ ಶಕ್ತಿಯುತರಾದಾಗ ಅವರು ಸಂತುಷ್ಟರಾಗುತ್ತಾರೆ. ತಾವು ಜಯಶಾಲಿಗಳಾಗದಿರುವ ಕೆಲಸಗಳನ್ನು ಅಪಜಯ ಮತ್ತು ನಿರಾಶೆಗಳ ಭಯದಿಂದ ಕೈಗೆತ್ತಿಕೊಳ್ಳುವುದಿಲ್ಲ. ಕೆಲಸದ ಅನುಭವ ಮತ್ತು ಜಯದ ರುಚಿ ತಿಳಿದಿರುವ ಮಕ್ಕಳು ತಾವೇ ತಾವಾಗಿ ತಮ್ಮ ಕೈಲಾಗುವಷ್ಟು ಉತ್ತಮ ಕೆಲಸಗಳನ್ನು ಮಾಡುವರು. ಪ್ರತಿಯೊಂದು ಮಗುವಿನ ಅವಶ್ಯಕತೆಗಳನ್ನು ಪೂರೈಸುವಂತೆ ಶಾಲೆ ಮತ್ತು ಕಾಲೇಜುಗಳು ಮಾರ್ಗದರ್ಶನ ನೀಡಬೇಕು. ಶಾಲಾ ಕಾಲೇಜುಗಳು ಈ ರೀತಿ ಮಾಡಲು ಹಲವು ದಾರಿಗಳಿವೆ.

ಸಾಮರ್ಥ್ಯಗಳನ್ನು ತಾವು ಮುಟ್ಟಬೇಕಾದ ಗುರಿಗನುಗುಣವಾಗಿ ಬೆಳೆಸಿಕೊಂಡು ತಂಡೂಲ್ಕರನಂತೆ ಜಯಶಾಲಿಗಳಾಗಿ ಮತ್ತೆ ಗುರಿಯನ್ನು ಉನ್ನತಗೊಳಿಸಿ ಅದಕ್ಕೆ ತಕ್ಕುದಾದ ಸಾಮರ್ಥ್ಯಗಳನ್ನು ಮತ್ತೆ ಬೆಳೆಸಿಕೊಳ್ಳುವ ಪ್ರತಿಭಾವಂತ ಮಕ್ಕಳು ಅನೇಕರು. ಆದರೆ ಈ ಕ್ರಿಯೆಯಲ್ಲಿ, ಎಂದರೆ ತಮ್ಮ ಸಾಮರ್ಥ್ಯವನ್ನು ತಾವೇ ಅರಿಯುವ ಮಕ್ಕಳು ಅಪಜಯಕ್ಕೆ ಒಳಗಾಗುವ ಸಂದರ್ಭಗಳು ಅನೇಕ, ಸಾವಿರಗಟ್ಟಲೆ ಎಂದರೆ ತಪ್ಪಾಗಲಾರದು. ಇಂತಹ ಮಕ್ಕಳಿಗೆ ಬೇಕಾದುದು ಒಂದು ಸಹಾಯ. ಇದನ್ನೇ ನಾವು 'ಮಾರ್ಗದರ್ಶನ' ಎನ್ನುವುದು. ಮಾರ್ಗದರ್ಶನ ಎಂದರೆ ಒಬ್ಬ ವ್ಯಕ್ತಿಗೆ ಜಯವನ್ನು ತಂದುಕೊಡುವುದಲ್ಲ. ಅವನು ಮಾಡಬೇಕಾದ ಕೆಲಸವನ್ನು ನಾವು ಮಾಡಿ ಮುಗಿಸಿ ಸುಗಮಗೊಳಿಸುವುದಲ್ಲ, ಉತ್ತೀರ್ಣನಾಗಲೆಂದು ಪ್ರಶ್ನೆಪತ್ರಿಕೆಯ ಮಟ್ಟವನ್ನು ಮೊಟಕು ಮಾಡುವುದಲ್ಲ. ಸ್ಪರ್ಧೆಯಲ್ಲಿ ಇತರ ಸ್ಪರ್ಧಿಗಳು ಪಾಲುಗೊಳ್ಳುವಿಕೆಯನ್ನು ತಡೆಗಟ್ಟುವುದಲ್ಲ, ಆದರೆ ವ್ಯಕ್ತಿಯಲ್ಲಿ ಆಂತರಿಕವಾಗಿ ಹುದುಗಿರುವ ಸಾಮರ್ಥ್ಯವನ್ನು ಹೊರಹೊಮ್ಮಿಸಿ ಅದು ಕ್ರಿಯಾಶೀಲವಾಗುವಂತೆ ಮಾಡುವುದು. ಮಾರ್ಗದರ್ಶನ ಎಂಬ ಪದವು ಒಂದು ಪರಿಕಲ್ಪನೆ. ''ಮಾರ್ಗದರ್ಶನ ಎಂದರೆ ನಿರ್ದೇಶನವಲ್ಲ. ಒಬ್ಬರ ಅಭಿಪ್ರಾಯವನ್ನು ಮತ್ತೊಬ್ಬರ ಮೇಲೆ ಹೇರುವುದಲ್ಲ. ಬದಲಿಗೆ ಯಾವುದೇ ವಯಸ್ಸಿನ ಒಬ್ಬ ವ್ಯಕ್ತಿಗೆ ತನ್ನ ಜೀವನದ ಚಟುವಟಿಕೆಗಳನ್ನು ವ್ಯವಸ್ಥೆಗೊಳಿಸಿ ಕೊಳ್ಳಲು, ತನ್ನ ಆಸೆ ಆಕಾಂಕ್ಷೆಗಳನ್ನು ಅಭಿವೃದ್ಧಿಗೊಳಿಸಿಕೊಳ್ಳಲು, ತಾನೇ ತೀರ್ಮಾನಗಳನ್ನು ಕೈಗೊಳ್ಳಲು ಮತ್ತು ತನ್ನ ಹೊರೆಯನ್ನು ತಾನೇ ನಿರ್ವಹಿಸುವಂತೆ ಮಾಡಲು, ಅರ್ಹತೆ ಮತ್ತು ತರಬೇತಿ ಪಡೆದಿರುವ ವ್ಯಕ್ತಿಗಳು ನೀಡುವ ಸಹಾಯವೇ ಮಾರ್ಗದರ್ಶನ''. (ಕ್ರೊ ಮತ್ತು ಕ್ರೊ).

ಮಾರ್ಗದರ್ಶನದ ಅವಶ್ಯಕತೆ ಕಂಡುಬರುವುದು ಸಮಸ್ಯೆ ಕಂಡು ಬಂದರೆ ಮಾತ್ರ. ಅನೇಕ ಮಕ್ಕಳಿಗೆ ತಮ್ಮ ಸಮಸ್ಯೆಯ ಅರಿವೇ ಇರುವುದಿಲ್ಲ. ಸಮಸ್ಯೆಯನ್ನು ಅರಿತ ವ್ಯಕ್ತಿ ಅರ್ಧಕ್ಕರ್ಧ ಸಮಸ್ಯೆಯ ಪರಿಹಾರವನ್ನು ತಿಳಿದಂತೆಯೇ ಶೈಕ್ಷಣಿಕವಾಗಿ ಯೋಚಿಸಿದಾಗ ಶೈಕ್ಷಣಿಕ ಸಮಸ್ಯೆಗಳನ್ನು ಎರಡು ಭಾಗಗಳಾಗಿ ನೋಡಬಹುದು. ವ್ಯವಸ್ಥೆಯಿಂದ ಉದ್ಭವವಾದ ಸಮಸ್ಯೆಗಳ ಪರಿಹಾರ ಅತಿಕ್ಲಿಷ್ಟವಾದುದು. ಅಂತಹ ಸಮಸ್ಯೆಗಳ ಕಾರಣವನ್ನು ಕಂಡುಹಿಡಿದು, ಬಿಡಿಸಿ ವ್ಯವಸ್ಥೆಯನ್ನು ಸರಿಪಡಿಸುವುದು ಪಂಡಿತರ, ತಜ್ಞರ ಹಾಗೂ ವ್ಯವಸ್ಥಾಪಕರ ಕರ್ತವ್ಯಯವಾಗಿರುತ್ತದೆ. ಇಂತಹ ಸಮಸ್ಯೆಗಳ ಜಟಿಲತೆಯನ್ನು ವಿಶ್ಲೇಷಿಸಿ ಪರಿಹಾರಗಳನ್ನು ಕಂಡುಹಿಡಿಯಬಲ್ಲ ಅನೇಕ ಮೇಧಾವಿಗಳಿದ್ದಾರೆ. ಅನುಸಂಧಾನಗಳ ಮೂಲಕ ಪರಿಹರಿಸುವ ಸಾಮರ್ಥ್ಯ ನಮ್ಮ ನಾಗರೀಕತೆಯಲ್ಲಿ ಬೆಳೆದುಬಂದಿವೆ. ರಾಜಕೀಯ ಸಂಕಲ್ಪ, ಆಡಳಿತಾತ್ಮಕ ಸಂಕಲ್ಪ ಮತ್ತು ಕಳಕಳಿಗಳು ಈ ಒಂದು ಆಯಾಮದ ಸಮಸ್ಯೆಗಳನ್ನು ಪರಿಹರಿಸಬಲ್ಲವು. ಸಮಸ್ಯೆಯೇ ಉದ್ಭವವಾಗದಂಥ ಸಮಾಜವನ್ನು ಕಾಣಲಾಗುವುದಿಲ್ಲ. ನಾಗರೀಕತೆಯೊಂದಿಗೆ ಸಮಸ್ಯೆಯ ಆಯಾಮಗಳು ಬದಲಾಗುವುದು ಬೆಳವಣಿಗೆಯ ಲಕ್ಷಣ.

ನಾವು ಅತಿ ಮುಖ್ಯವಾಗಿ ಚಿಂತಿಸಬೇಕಾಗಿರುವುದು ಪ್ರತಿವ್ಯಕ್ತಿಯ ಶೈಕ್ಷಣಿಕ ಸಮಸ್ಯೆಗಳ ಬಗ್ಗೆ, ಪ್ರತಿಯುವಕ ಯುವತಿಯರು ತಮ್ಮ ಸಮಸ್ಯೆಯನ್ನು ತಾವೇ ಪತ್ತೆ ಮಾಡಿ ಅದನ್ನು ಬಿಡಿಸಿಕೊಳ್ಳುವ ಸಾಮರ್ಥ್ಯವನ್ನು ಪಡೆದಿರಬೇಕು. ಹೀಗಾಗದಿದ್ದರೆ

ವ್ಯಕ್ತಿಯ ಸಮಸ್ಯೆಗಳು ಸಿಡಿದೆದ್ದು ಸಾಮಾಜಿಕ ಸಮಸ್ಯೆಯಾಗುವ ಭಯವಿದೆ. ಶಾಲಾ ಕಾಲೇಜುಗಳ ವಿದ್ಯಾಭ್ಯಾಸ ಕಾಲದಲ್ಲೇ ಚಿಕ್ಕಪುಟ್ಟ ಶೈಕ್ಷಣಿಕ ಸಮಸ್ಯೆಗಳನ್ನು ಬಿಡಿಸಿಕೊಳ್ಳುವ ಸಾಮರ್ಥ್ಯ ಪಡೆದುಕೊಂಡರೆ, ಮುಂದೆ ಯುವಜನಾಂಗವು ಸಮಾಜದ ಸಮಸ್ಯೆಗಳನ್ನು ಬಿಡಿಸಲು ಸಾಧ್ಯವಾಗುವುದೇ ಅಲ್ಲದೆ ಬುನಾದಿಯನ್ನೇ ಸರಿಯಾಗಿ ನಿರ್ಮಿಸಿ (ಸರಿಪಡಿಸಿ) ಸಮಸ್ಯೆಗಳ ಉದ್ಭವವನ್ನು ಕಡಿಮೆಮಾಡಬಲ್ಲ ಚಾಕಚಕ್ಯತೆಯನ್ನು ಪಡೆಯಬಲ್ಲರು. ಆದ್ದರಿಂದಲೇ ಶೈಕ್ಷಣಿಕ ಮಾರ್ಗದರ್ಶನವು ಶಾಲೆಯ ಒಂದು ಮುಖ್ಯ ಕಾರ್ಯಕ್ರಮವಾಗಬೇಕು. ವಿದ್ಯಾರ್ಥಿ, ವಿದ್ಯಾರ್ಥಿನಿಯರ ಶಾಲಾ ವಿಷಯ. ಪಠ್ಯಕ್ರಮ, ಅಭ್ಯಾಸಕ್ರಮ ಹಾಗೂ ಶಾಲಾ ಜೀವನದ ಬಗ್ಗೆ ಆಯ್ಕೆ ಹಾಗೂ ಹೊಂದಾಣಿಕೆಗೆ ನೀಡುವ ಸಹಾಯವೇ ಶೈಕ್ಷಣಿಕ ಮಾರ್ಗದರ್ಶನ. ಶೈಕ್ಷಣಿಕ ಮಾರ್ಗದರ್ಶನದ ಕಾರ್ಯಕ್ರಮಗಳು ಕೆಲವು ನಂಬಿಕೆಗಳ ಮೇಲೆ ಸಂರಚಿಸಲ್ಪಡಬೇಕು.

★ *ಪ್ರತಿ ವ್ಯಕ್ತಿಯ ಘನತೆ ಮುಖ್ಯವಾದುದು.*

★ *ಪ್ರತಿ ವಿದ್ಯಾರ್ಥಿ ಅಥವಾ ವಿದ್ಯಾರ್ಥಿನಿ ತನ್ನದೇ ಆದ ವ್ಯಕ್ತಿತ್ವವನ್ನು ಹೊಂದಿರುವುದಲ್ಲದೆ ಇತರರಿಗಿಂತ ವಿಭಿನ್ನವಾದ ಲಕ್ಷಣಗಳನ್ನು ಹೊಂದಿರುತ್ತಾರೆ.*

★ *ಇಂದಿನ ವಿದ್ಯಾರ್ಥಿ ವಿದ್ಯಾರ್ಥಿನಿಯರು ಮುಂದಿನ ಸಮಾಜದ ಅವಿಭಾಜ್ಯ ಅಂಗಗಳು.*

★ *ತಮ್ಮ ಮನೋಧೋರಣೆಯಂತೆ ವ್ಯಕ್ತಿಗಳು ಸಮಾಜದಲ್ಲಿ ವರ್ತಿಸುತ್ತಾರೆ.*

★ *ಪ್ರತಿಯೊಬ್ಬರಲ್ಲೂ ಕಲಿಕೆಯ ಸಾಮರ್ಥ್ಯಗಳಿರುತ್ತದೆ.*

★ *ಪ್ರತಿವಿದ್ಯಾರ್ಥಿ ವಿದ್ಯಾರ್ಥಿನಿಯೂ ತಮ್ಮ ಬೆಳವಣಿಗೆಯ ಹಂತದಲ್ಲಿ ಮಾರ್ಗದರ್ಶನವನ್ನು ಅಪೇಕ್ಷಿಸುತ್ತಾರೆ.*

★ *ಪ್ರತಿ ವ್ಯಕ್ತಿಗೂ ಸೋಲು-ಗೆಲುವುಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವ ಆಂತರಿಕವಾದ ಲಕ್ಷಣವಿದ್ದು ಇದು ಗೆಲುವಿನ ಅರ್ಥವನ್ನು ನಿರೂಪಿಸಬಲ್ಲದು.*

★ *ಶಾಲೆಯು ಸಮಾಜದ ನೀತಿ-ನಿಲುವನ್ನು ಪ್ರತಿಬಿಂಬಿಸುವುದಲ್ಲದೆ, ಸಮಾಜದ ನೀತಿ-ನಿರೂಪಣೆಗೆ ಕಾರಣವಾಗಬಲ್ಲದು.*

ಒಬ್ಬ ವಿದ್ಯಾರ್ಥಿ ತನ್ನ ಶೈಕ್ಷಣಿಕ ಪರಿಸರಕ್ಕೆ ಹೊಂದಿಕೊಳ್ಳಲು ಮಾಡುವ ಸಹಾಯವೇ ಶೈಕ್ಷಣಿಕ ಮಾರ್ಗದರ್ಶನ. ಈ ಜವಾಬ್ದಾರಿಯನ್ನು ಅನೇಕ ಶಾಲೆಗಳು ತಮ್ಮ ತಲೆಯ ಮೇಲಿನ ಜವಾಬ್ದಾರಿಯೆಂದು ತಿಳಿಯದೆ, ಪೋಷಕರ ಜವಾಬ್ದಾರಿಯೆಂದು ತಿಳಿದು, ಕೇವಲ ಅಕ್ಷರವನ್ನು ಕಲಿಸುವ ಕಾರ್ಖಾನೆಗಳಾಗಿವೆ.

ಶೈಕ್ಷಣಿಕ ಮಾರ್ಗದರ್ಶನವನ್ನು ಮೂರು ಮುಖ್ಯವಿಧಗಳಾಗಿ ವಿಂಗಡಿಸಬಹುದು. ಅವುಗಳು ಸಲಹೆ, ಸಮೂಹ ಮಾರ್ಗದರ್ಶನ ಮತ್ತು ವೈದ್ಯಕೀಯ ಸಲಹೆ. ಸುಮಾರು ಶೇ. 5 ಮಂದಿ ಒಂದಲ್ಲ ಒಂದು ಸಮಯ ತೀವ್ರ ಸಂವೇಗಾತ್ಮಕ ರೋಗಗ್ರಸ್ಥರಾಗುವ ಸಂಭವವಿದೆ. ಅಂತಹವರಿಗೆ ಮನೋಚಿಕಿತ್ಸಕನಿಂದ ಚಿಕಿತ್ಸೆ ಕೊಡಿಸಬೇಕಾಗುತ್ತದೆ. ಶಾಲಾ ಶಿಕ್ಷಕರಿಗೆ ಇಂತಹ ಮಕ್ಕಳಿಗೆ ಮಾರ್ಗದರ್ಶನ ಕೊಡುವುದು ಸಾಧ್ಯವಿಲ್ಲ. ಉಳಿದಂತೆ ಮಿಕ್ಕೆಲ್ಲ ಮಕ್ಕಳಿಗೂ ಸಲಹೆ ಅಥವಾ ಸಮೂಹ ಮಾರ್ಗದರ್ಶನ ವಿಧಾನದಿಂದ ಮಾರ್ಗದರ್ಶನ ನೀಡಬಹುದು.

ಶಿಕ್ಷಣದಲ್ಲಿ ನಮ್ಮ ಮುಖ್ಯ ಗುರಿ ಮಾರ್ಗದರ್ಶನ. ಆದರೆ ನಾವು ಉಪಯೋಗಿಸುವ ತಂತ್ರ, 'ಸಲಹೆಯ ವಿಧಾನ'. ಇದನ್ನು ಇಂಗ್ಲೀಷ್‌ನಲ್ಲಿ 'ಕೌನ್ಸೆಲಿಂಗ್' ಎನ್ನುತ್ತೇವೆ. ಸಲಹೆಯು ನಮ್ಮ ನಾಗರೀಕತೆಯಷ್ಟೆ ಪುರಾತನವಾದ ಮಾರ್ಗದರ್ಶನದ ವಿಧಾನ. ಔಪಚಾರಿಕವಾಗಿ ಸಲಹೆಯು ಒಂದು ವೃತ್ತಿಯಾದುದು ಮಹಾಯುದ್ಧಗಳ ನಂತರ ಹೆಚ್ಚು ಅನುಭವವಿರುವ, ಹೆಚ್ಚು ಬುದ್ಧಿವಂತನಾದ ಹಿರಿಯ ವ್ಯಕ್ತಿಯು ಕಡಿಮೆ ಅನುಭವವುಳ್ಳ ವ್ಯಕ್ತಿಗೆ ತನ್ನ ಸಮಸ್ಯೆಯನ್ನು ಬಿಡಿಸಿಕೊಳ್ಳಲು ಕೊಡುವ ವೈಯಕ್ತಿಕ ಮಾರ್ಗದರ್ಶನವೇ ಸಲಹೆ. ಸಲಹೆಯು ಸಹಾಯ ಪಡೆಯಲು ಆಕಾಂಕ್ಷಿಸುವ ಮತ್ತು ಸಲಹೆ ಕೊಡಲು ಸಿದ್ಧವಿರುವ ಇಬ್ಬರು ವ್ಯಕ್ತಿಗಳು ಸೇರಿ ಸಮಸ್ಯೆಯನ್ನು ಬಿಡಿಸುವ ಒಂದು ಪ್ರಕ್ರಿಯೆ.

ಅನೇಕ ಸಂದರ್ಶನಗಳ ಮೂಲಕ ಸಲಹೆಯನ್ನು ಫಲಪ್ರದ ಮಾಡಲಾಗುವುದು. ಶಿಕ್ಷಕರು ಸಾಮಾನ್ಯವಾಗಿ ನಂಬಿಕೆಗೆ ಪಾತ್ರನಾದ ಸಲಹೆಗಾರನಾಗುವ ಸಾಧ್ಯತೆ ಇದೆ. ತರಬೇತಿ ಪಡೆದ ಶಿಕ್ಷಕರು ಉತ್ತಮ ಸಲಹೆಗಾರರಾಗುವುದರಲ್ಲಿ ಸಂದೇಹವಿಲ್ಲ. ಈ ತಂತ್ರದಲ್ಲಿ ಸಲಹೆಗಾರನು ಸಲಹೆ ಪಡೆಯುವವನನೊಂದಿಗೆ ಸಂಪರ್ಕ ಕಲ್ಪಿಸಿಕೊಂಡು ಆತ್ಮೀಯತೆಯನ್ನು ಬೆಳೆಸಿಕೊಳ್ಳುತ್ತಾನೆ. ನಂತರ ಅವರಿಬ್ಬರು ವಿಚಾರ ವಿನಿಮಯಗಳ ಮೂಲಕ ಸಮಸ್ಯೆಯನ್ನು ಪರಿಹರಿಸುವ ವಿಧಾನವನ್ನು ಹುಡುಕುತ್ತಾರೆ. ಸಮಸ್ಯೆ ಪರಿಹಾರಕ್ಕೆ ಬೇಕಾದ ಸಾಮರ್ಥ್ಯವನ್ನು ವ್ಯಕ್ತಿಯಲ್ಲಿ ಬೆಳೆಸಿ ತಾನೇ ಸಮಸ್ಯೆಯನ್ನು ಬಿಡಿಸಿಕೊಳ್ಳುವಂತೆ ಮಾಡುತ್ತಾನೆ. ಸಲಹಾ ವಿಧಾನವು ಮಾನಸಿಕ ಆರೋಗ್ಯ ಮತ್ತು ಅನಾರೋಗ್ಯಗಳ ನಡುವಿನ ಹಂತದಲ್ಲಿರುವವನನ್ನು ಮಾನಸಿಕ ಆರೋಗ್ಯವನ್ನು ಪಡೆದು ಉತ್ತಮ ಹೊಂದಾಣಿಕೆಯುಳ್ಳ ವ್ಯಕ್ತಿಯನ್ನಾಗಿ ಮಾಡಬಲ್ಲದು. ಸಲಹಾ ವಿಧಾನವನ್ನು ಮೂರು ರೀತಿಗಳಲ್ಲಿ ಉಪಯೋಗಿಸಬಹುದು. ವಿದ್ಯಾರ್ಥಿಗೆ ತನ್ನ





ಸಮಸ್ಯೆಯನ್ನು ತಾನೇ ವಿಶ್ಲೇಷಿಸುವ ಸಾಮರ್ಥ್ಯವಿಲ್ಲದಿದ್ದಾಗ, ಸಲಹೆಗಾರನು ಮುಖ್ಯಪಾತ್ರವನ್ನು ವಹಿಸಿ ದಾರಿ ತೋರಿಸುವ ವಿಧಾನವನ್ನು ನಿರ್ದೇಶನ ಸಲಹೆ ಎನ್ನುತ್ತೇವೆ. ಸಲಹೆಗಾರನು ಒಬ್ಬ ವೈದ್ಯನ ರೀತಿಯಲ್ಲಿ ಪರಿಹಾರದ ವಿಧಾನವನ್ನು ರೂಪಿಸುತ್ತಾನೆ. ಸಲಹೆ ಪಡೆಯುವವನು ನಿರ್ದೇಶನ ಪಾಲಿಸಿ ತನ್ನ ಸಮಸ್ಯೆಯನ್ನು ಪರಿಹರಿಸಿಕೊಳ್ಳುತ್ತಾನೆ. ಈ ವಿಧದಲ್ಲಿ ಸಲಹೆಗಾರನಿಗೆ ಹೆಚ್ಚು ಪ್ರಾಮುಖ್ಯತೆ ಇದೆ. ಆದರೆ ತನ್ನ ಸಮಸ್ಯೆಯನ್ನು ತಾನೇ ವಿಶ್ಲೇಷಣೆ ಮಾಡಿಕೊಳ್ಳುವಂತೆ ಮಾಡುವುದು ಕಷ್ಟಕರವಾದುದು. ತಾನು ಸಂವೇಗಗಳಿಗೆ ಬಲಿಯಾಗಿರುವೆನೆಂದು ಒಪ್ಪಿಕೊಳ್ಳುವ ವ್ಯಕ್ತಿ ತನ್ನ ಸಂವೇಗಗಳ ಮೇಲೆ ಒಳ್ಳೆ ನಿಯಂತ್ರಣವನ್ನಡಬಲ್ಲನು. ''ಹೌದು ನಾನು ಸುಮ್ಮನೆ ಅವನ ಮೇಲೆ ಉರಿದು ಬಿದ್ದೆ'', ''ಕೋಪದಿಂದ ತಪ್ಪು ಮಾಡಿದೆ'' ಎಂಬ ಪರಿವೆ ಬಂದಲ್ಲಿ ಮುಂದೆ ಉದ್ರೇಕಿಸುವ ಭಗ್ನ ಮನೋರಥಗಳು ಮತ್ತು ಭೀತಿಗಳೊಂದಿಗೆ ವ್ಯವಹರಿಸುವಲ್ಲಿ ಅವನು ಹೆಚ್ಚು ಅರಿವನ್ನು ಪ್ರದರ್ಶಿಸುತ್ತಾನೆ. ಇಂದಿನ ಪರಿಸ್ಥಿತಿಯಲ್ಲಿ ಶಿಕ್ಷಕರಿಗೆ ಸಲಹೆಯ ತತ್ವವನ್ನು ಮನವರಿಕೆ ಮಾಡಿಕೊಡಬೇಕಾಗುತ್ತದೆ.

ವಿದ್ಯಾರ್ಥಿ, ವಿದ್ಯಾರ್ಥಿನಿಯರ ಸಾಮಾನ್ಯವಾದ ಸಮಸ್ಯೆಗಳನ್ನು ಪತ್ತೆಮಾಡಿ ಅವರಿಗೆ ಮಾರ್ಗದರ್ಶನವನ್ನು ನೀಡುವ ಕಾರ್ಯಕ್ರಮ ಸಮೂಹ ಮಾರ್ಗದರ್ಶನ. ಗುಂಪಿನಲ್ಲಿ ಸುಲಭವಾಗಿ ಅರ್ಥಮಾಡಿಕೊಳ್ಳುವ ಲಕ್ಷಣ ಮಕ್ಕಳಲ್ಲಿರುತ್ತದೆ. ಶೈಕ್ಷಣಿಕ ವಿಚಾರಗಳ ಚರ್ಚೆ, ವೃತ್ತಿ ಯೋಜನೆ, ಶಾಲೆಯ ಸಮಸ್ಯೆಗಳು, ಸಾಮಾಜಿಕವಾಗಿ ಬರಬಹುದಾದ ಅಡ್ಡಿ ಆತಂಕಗಳು ಮತ್ತು ವೃತ್ತಿ ಆಯ್ಕೆಗಳಂತೆ ವಲಯಗಳಲ್ಲಿ ಸಾಮೂಹಿಕ ಮಾರ್ಗದರ್ಶನದ ಅವಶ್ಯಕತೆ ಇದೆ. ಭಾಷಣ, ಪ್ರದರ್ಶನ, ಜೀವನಗತಿ ಸಭೆಗಳು ಮುಂತಾದ ತಂತ್ರಗಳನ್ನು ಸಾಮೂಹಿಕ ಮಾರ್ಗದರ್ಶನದಲ್ಲಿ ವ್ಯಾಪಕವಾಗಿ ಉಪಯೋಗಿಸಬೇಕಾಗುತ್ತದೆ.

ತಾವೇ ಕಲಿಯುವ ಸಾಮರ್ಥ್ಯವನ್ನು ಪಡೆದಿರುವ ಮತ್ತು ಸಾಮರ್ಥ್ಯವನ್ನು ಆಗಲೇ ಸ್ವಲ್ಪ ಬೆಳೆಸಿಕೊಂಡಿರುವ ಮಕ್ಕಳಿಗೆ ಕಲಿಸುವುದು ಸುಲಭ. ಕಲಿಕೆಯ ಸಂದರ್ಭವನ್ನು ತನ್ನ ಹಿಂದಿನ ಅನುಭವಗಳ ಮೇಲೆ, ಸಾಮರ್ಥ್ಯಗಳ ಆಧಾರದ ಮೇಲೆ ಅವಲೋಕಿಸಿ ಪ್ರತ್ಯಕ್ಷಗೊಳಿಸುವ ಸಾಮರ್ಥ್ಯವಿರುವ ಮಕ್ಕಳು ಸುಲಭವಾಗಿ ಕಲಿತು ಶಿಕ್ಷಕರಿಗೆ ಹೆಮ್ಮೆ ತರುವ ಸಂದರ್ಭಗಳು ಅನೇಕ. ಇಂತಹ ಮಕ್ಕಳ ಮೇಲೆ ಹೆಚ್ಚಿನ ಅಕ್ಕರೆಯನ್ನು ತೋರುವುದು ಎಲ್ಲಾ ಶಿಕ್ಷಕ ಶಿಕ್ಷಕಿಯರ ಒಂದು ಮನೋವೃತ್ತಿ. ಕಲಿಯಲೇ ಅಸಮರ್ಥರಾಗಿರುವ ಮಕ್ಕಳ ಬಗ್ಗೆ ಶಿಕ್ಷಕರು ಶಿಕ್ಷಕಿಯರು ಸಿಡಿದುಬೀಳುವುದು, ಕಲಿಸಲು ಹೊಡೆಯುವುದು. ಬಯ್ಯುವುದು ಒಂದು ನೀತಿಯಾಗಿ ಹೋಗಿದೆ. ಕಲಿಯುವ ಸಾಮರ್ಥ್ಯವೆಂದರೆ ಇಂದ್ರಿಯಗಳನ್ನು ಸರಿಯಾದ ಕಲಿಕೆಯ ಸಂದರ್ಭಕ್ಕೆ ಕ್ರೋಡಿಕರಿಸುವುದಾಗಲಿ ಕಲಿಕೆಯ ಅನುಭವದಲ್ಲಿ ಸಂರಚನೆಗಳನ್ನು ಪ್ರತ್ಯೇಕ್ಷೀಕರಿಸುವುದು ಈ ಮಕ್ಕಳಿಗೆ ಅಸಾಧ್ಯ. ಅವರಿಗೇ ಹೆಚ್ಚು ಮಾರ್ಗದರ್ಶನ ಬೇಕು. ಪ್ರತಿ ಕಲಿಕೆಯ ಸಂದರ್ಭವು ಅವರ ಮಾನಸಿಕ ಮಟ್ಟಕ್ಕೆ ಅನುಗುಣವಾಗಿ ಸಂರಚಿಸಲ್ಪಡಬೇಕು. ಅವರು ತಮ್ಮ ಇಂದ್ರಿಯಾನುಭವದಲ್ಲಿ ಕೆಲವು ಸಂರಚನೆಗಳನ್ನು ಕಾಣುವಂತೆ ಮಾಡಬೇಕು. (ಉದಾಹರಣೆಗೆ ೧ ಮತ್ತು ೨ ಎರಡು ಸಂಖ್ಯೆಗಳು. ಅವುಗಳು ವಸ್ತುಗಳನ್ನು ಪ್ರತಿನಿಧಿಸುತ್ತವೆ. ಅವುಗಳಿಗೆ ಅಂತರವಿದೆ. ಎರಡರಲ್ಲಿ ಎರಡು ಒಂದುಗಳಿವೆ. ಎರಡು ಹೆಚ್ಚು ಒಂದು ಕಡಿಮೆ) ಇಂತಹ ಪರಿಕಲ್ಪನೆಗಳನ್ನು ಮಗುವಿನ ಆಟದ- ಮಾಧ್ಯಮದೊಡನೆ ತೋರಿಸದಿದ್ದರೆ ಕಲಿಕೆ ಸಾಧ್ಯವಿಲ್ಲ. ಕಲಿಯುವ ಮಗುವಿನ ಮಾಧ್ಯಮಕ್ಕೆ ಅನುಭವವನ್ನು ಅಳವಡಿಸಬೇಕಾಗುತ್ತದೆ.

ಹೀಗೆ ಮಾಡದಿದ್ದರೆ ಕಲಿಕೆಯೇ ಇರುವುದಿಲ್ಲ. ಇಂತಹ ಸಂದರ್ಭದಲ್ಲಿ ಕಲಿಯಲಿಲ್ಲ ಎನ್ನುವ ಸಮಸ್ಯೆ ಮಗುವಿನ ಮನಸ್ಸಿಗೆ ಬರುವುದಿಲ್ಲ. ಆದರೆ ಅದು ಶಿಕ್ಷಕನ ಸಮಸ್ಯೆಯಾಗಿ ಹೋಗುತ್ತದೆ. ಆಗ ಸಲಹೆ ಶಿಕ್ಷಕನಿಗೆ ಕೊಡಬೇಕಾಗುತ್ತದೆ. ಮಕ್ಕಳ ಕಲಿಕೆಯ ಸಮಸ್ಯೆಗೆ ಶಿಕ್ಷಕನು ಮತ್ತು ವ್ಯವಸ್ಥೆಯು ಕಾರಣವಾಗುತ್ತವೆ. ಶೇ. ೪೦ ಉತ್ತೀರ್ಣರಾಗುವ ವ್ಯವಸ್ಥೆಯಲ್ಲಿ ಶೇ. ೬೦ ನಪಾಸಾಗಿರುವುದು ಶಿಕ್ಷಕ ಮತ್ತು ವ್ಯವಸ್ಥೆ. ಆದ್ದರಿಂದ ಈಗಿನ ವ್ಯವಸ್ಥೆಯಲ್ಲಿ ಕಲಿಯಲು ಅಸಮರ್ಥರಾದ ಮಕ್ಕಳಲ್ಲಿ ತಪ್ಪನ್ನು ಹುಡುಕದೆ ಅವರು ಕಲಿಯುವ ಸಾಮರ್ಥ್ಯವನ್ನು ಪಡೆಯುವಂತೆ ಮಾಡಬೇಕಾಗಿರುವುದು ಶಿಕ್ಷಕರು.

ಸಾಮಾನ್ಯವಾಗಿ ದಿನಚರಿಯಲ್ಲಿ ಎಲ್ಲರೊಂದಿಗೆ ಭಾಗವಹಿಸಿ ಆಡಿ ಕುಣಿಯುವ ಯೋಗ್ಯತೆಯನ್ನು ಹೊಂದಿರುವ ಒಂದು ಮಗು ಕಲಿಯದಿರಲು ಕಾರಣ ಮಗುವಲ್ಲ, ಅದರ ಮಾನಸಿಕ ಬೆಳವಣಿಗೆಗೆ ಅನುಗುಣವಾಗಿ ಕಲಿಕೆಯ ಸಂದರ್ಭವನ್ನು ರೂಢಿಸದಿರುವ ಶಿಕ್ಷಣದ ವ್ಯವಸ್ಥೆಯ ಅಸಮರ್ಥತೆ. ಇದಕ್ಕೆ ಹೆಚ್ಚು ಕಾರಣ ಶಿಕ್ಷಕರು ಎಂದು ಹೇಳಿಕೊಳ್ಳಬೇಕಾಗುತ್ತದೆ. ಕಾರಣ, ನಮ್ಮ ವ್ಯವಸ್ಥೆಯಲ್ಲಿ ಕಲಿಯುವ ಸಾಮರ್ಥ್ಯವನ್ನು ತೋರುವ ಮಕ್ಕಳು ವಿರಳ. ಅವರಿಗೆ ಸಲಹೆ ಅಗತ್ಯ. ಅವರ ಸಮಸ್ಯೆ-ಕಲಿಯಲು ಅಸಮರ್ಥರಾದ ಮಕ್ಕಳನ್ನು ಕಲಿಯುವವರನ್ನಾಗಿ ಮಾಡುವುದು ಹೇಗೆ? ಎಂದು ಆಗಬೇಕು. ಈ ಸಮಸ್ಯೆ ಬಿಡಿಸಬೇಕಾದರೆ ಶಿಕ್ಷಕ/ಶಿಕ್ಷಕಿಯರ ಸಾಮರ್ಥ್ಯವನ್ನು ಬೆಳೆಸಬೇಕು. ಅದಕ್ಕಾಗಿ ಮಾರ್ಗದರ್ಶನ ಮತ್ತು ಸಲಹೆ ಕಾರ್ಯಕ್ರಮಗಳು ಸಿದ್ಧವಾಗಬೇಕು.

ಇದುವರೆಗೆ ನಮ್ಮ ಚಿಂತನೆ ಮಾನಸಿಕವಾಗಿ, ದೈಹಿಕವಾಗಿ ಸರಿಯಿರುವ ಮಕ್ಕಳ ಬಗ್ಗೆ ಆಯಿತು. ಆದರೆ ಕೆಲವು

ಮನೋವಿಜ್ಞಾನಿಗಳು ನಮ್ಮ ಮಕ್ಕಳಲ್ಲಿ ಶೇ. ೨೦ರಷ್ಟು ಮಕ್ಕಳು ಮನೋವೈಜ್ಞಾನಿಕ ಸಮಸ್ಯೆಗಳಿಗೆ ಒಳಗಾಗಿದ್ದಾರೆ ಎಂಬ ಅಭಿಪ್ರಾಯಪಟ್ಟಿದ್ದಾರೆ. (Keynote address of Dr. Chandrashekar, Psychiatrist, NIMHANS, Bangalore – The Hindu – 18th Aug. 1998). ಅವರ ಅಭಿಪ್ರಾಯದಂತೆ ಈ ಸಮಸ್ಯೆಗಳ ಪರಿಹಾರ ವಿದ್ಯಾಭಿಲಾಷಿಗಳಿಂದಲೇ ಸಾಧ್ಯ. ಸ್ವಪ್ರೇರಣೆ, ಅಭಿಪ್ರೇರಣೆ ಗೊಳಿಸುವಿಕೆಯಿಂದ ಈ ಸಮಸ್ಯೆಗಳನ್ನು ಪರಿಹರಿಸಿಕೊಳ್ಳ ಬಹುದೆಂದು ಮನೋವಿಜ್ಞಾನಿಗಳು ಹೇಳಿರುವುದು ಮಾರ್ಗದರ್ಶನದ ಕಾರ್ಯಕ್ರಮದ ಅವಶ್ಯಕತೆ ಬಗ್ಗೆ ಒತ್ತುಕೊಡುತ್ತದೆ.

**ಈ** ಮನೋಚಿಕಿತ್ಸಕರ ಪ್ರಕಾರ ಸಾಮಾನ್ಯ ಮಾನಸಿಕ ಸಮಸ್ಯೆಗಳೆಂದರೆ ಅಭ್ಯಾಸ ಸಮಯ ಮತ್ತು ಪರೀಕ್ಷಾಸಮಯಗಳ ಅಭಾವದ ಮಾನಸಿಕ ಒತ್ತಡ, ತಮ್ಮ ಸಾಮರ್ಥ್ಯಗಳ ಮೇಲಿನ ಅಪನಂಬಿಕೆ ಹಾಗೂ ಗುರಿ ನಿರೂಪಿಸಿಕೊಳ್ಳುವಿಕೆಯ ಅಸಮರ್ಥತೆ.

**ಮ**ಕ್ಕಳಲ್ಲಿ ಸರಿಯಾದ ಅಭ್ಯಾಸಕ್ರಮವನ್ನು ಹವ್ಯಾಸವನ್ನಾಗಿ ಮಾಡಬೇಕು. 'ಯೋಜಿಸಲ್ಪಟ್ಟ ಓದುಗಾರಿಕೆ'ಯನ್ನು ಬೆಳೆಸುವುದು, ತಾವು ಅಭ್ಯಾಸ ಮಾಡಿದುದರ ಬಗ್ಗೆ ತಾವೇ ಹಿಮ್ಮಾಹಿತಿಯನ್ನು ಪಡೆದುಕೊಂಡು ಮೌಲ್ಯಮಾಪನ ಮಾಡಿಕೊಳ್ಳುವುದು. ತಮ್ಮ ಮನಸ್ಸಿಗೆ ಕೆಲವು ಕಾಲ ವಿಶ್ರಾಂತಿ ಕೊಡುವಂಥ ಹವ್ಯಾಸಗಳನ್ನು ಬೆಳೆಸಿಕೊಳ್ಳುವುದು ಹಾಗೂ ಓದಿನ ಮಧ್ಯೆ ಓದಿದ ಅಂಶಗಳನ್ನು ಮೆಲುಕುಹಾಕಿಕೊಳ್ಳುವ ಹವ್ಯಾಸಗಳು ಅವರು ಶೈಕ್ಷಣಿಕವಾಗಿ ಊರ್ಜಿತರಾಗುವಂತೆ ಮಾಡುತ್ತದೆ. ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದು ಸಹಜವಾಗುತ್ತದೆ. ಶಿಕ್ಷಕ ಶಿಕ್ಷಕಿಯಾದರೂ ಸಾಮಾನ್ಯವಾದ ಮಕ್ಕಳನ್ನು ಪ್ರತಿಭಾವಂತ ಮಕ್ಕಳೊಂದಿಗೆ ಹೋಲಿಸಿ ಅವರ ಮನಸ್ಥೈರ್ಯವನ್ನು ಕಡಿಮೆ ಮಾಡಬಾರದು. ತನ್ನ ಹಿಂದಿನ ಸಾಧನೆಗಿಂತ ತನ್ನ ಇಂದಿನ ಸಾಧನೆ ಉತ್ತಮವಾಗುತ್ತಿರುವುದನ್ನು ವಿದ್ಯಾರ್ಥಿಗೆ ತೋರಬೇಕು. ಇದನ್ನು ಹೊಗಳಿಕೆ, ಸಂತೋಷಗಳನ್ನು ಸೂಚಿಸುವುದರ ಮೂಲಕ ಪುನರ್ಬಲಗೊಳಿಸಬೇಕು. ಹದಿಹರೆಯದವರು ತಮ್ಮ ಮಾನಸಿಕ, ಸಂವೇಗಾತ್ಮಕ ಮತ್ತು ದೈಹಿಕ ಸಮಸ್ಯೆಗಳನ್ನು ಹಿರಿಯರೊಂದಿಗೆ ಚರ್ಚಿಸಿ ಸಲಹೆ ಪಡೆದುಕೊಳ್ಳುವಂತೆ ಸ್ವಾತಂತ್ರ್ಯವಿರಬೇಕು. ಅದಕ್ಕನುಗುಣವಾದ ವಾತಾವರಣವನ್ನು ಹಿರಿಯರು ಕಲ್ಪಿಸಿಕೊಡಬೇಕು. ಹದಿಹರಿಯದವರು ಹಿರಿಯನೊಬ್ಬನನ್ನು ಸ್ನೇಹಿತರಂತೆ ಕಾಣುವ ವಾತಾವರಣವು ಸೃಷ್ಟಿಯಾಗಬೇಕು. ಶಿಕ್ಷಕರು ಕೌಶಲಯುಕ್ತ ಸಲಹೆಗಾರರಾಗಿರಬೇಕು. ಪೋಷಕರೇ ಈ ಪ್ರವೃತ್ತಿಯನ್ನು ಹೊಂದಿದ್ದರೆ ಶಿಕ್ಷಕರ ಮೇಲಿನ ಭಾರವು ಕಡಿಮೆಯಾಗಬಲ್ಲದು.

**ಈ** ಕಾಲದ ಶಿಕ್ಷಣ ಹೆಚ್ಚು ಔಪಚಾರಿಕವಾದುದು. ನಮ್ಮ ಅಂಕಪ್ರಧಾನವಾದ ವ್ಯವಸ್ಥೆ ಅದರ ಅವಶ್ಯಕತೆಯನ್ನು ಮನಗಂಡಂತಿಲ್ಲ. ನಿಜವಾದ ವಿಷಯವನ್ನು ಕಲಿಯುವುದರ ಬದಲು ಒಳ್ಳೆಯ ಅಥವಾ ತೇರ್ಗಡೆಗೆ ಬೇಕಾದ ಅಂಕಗಳನ್ನು ಪಡೆಯುವುದೇ ವಿದ್ಯಾರ್ಥಿಯ ಮುಖ್ಯ ಚಿಂತನೆಯಾಗುವುದು ಮತ್ತು ಅಂಶಪ್ರಧಾನದ ವ್ಯವಸ್ಥೆ ಬೆಳೆಸುವ ಮನಸ್ತಾಪ ಮುಂತಾದವುಗಳನ್ನು ಈ ಅಂಕಪ್ರಧಾನ ವ್ಯವಸ್ಥೆಯನ್ನು ತೆಗೆಯುವುದರಿಂದ ಹೋಗಲಾಡಿಸಬಹುದು.

**ಶಾ**ಲೆಗಳು ಪೋಷಕ-ಬೋಧಕ ಸಮ್ಮೇಳನಗಳನ್ನು ಹೆಚ್ಚಿಸಬೇಕು. ಶಿಕ್ಷಕರು ತಮ್ಮ ವಿದ್ಯಾರ್ಥಿ-ವಿದ್ಯಾರ್ಥಿನಿಯರುಗಳ ಶೈಕ್ಷಣಿಕ ಸಾಮರ್ಥ್ಯ ಮತ್ತು ಸಾಧನೆಗಳ ಬಗ್ಗೆ ಹಾಗೂ ಅವರ ಆರೋಗ್ಯ, ಅಭಿವೃತ್ತಿಗಳು ಮತ್ತು ಸಾಮಾಜಿಕ ವರ್ತನೆಗಳ ಬಗ್ಗೆ ಸದೃಢವಾದ ದತ್ತಾಂಶಗಳನ್ನು ಪಡೆದಿರಬೇಕು. ಇಂತಹ ಸಮ್ಮೇಳನಗಳು ನಿಯಮಿತವಾಗಿ ಆದರೆ ಪೋಷಕರ ವಿಶ್ವಾಸನೀಯತೆಯನ್ನು ಗಳಿಸಿ ಫಲಪ್ರದವಾಗುತ್ತವೆ.

**ಶೈ**ಕ್ಷಣಿಕ ಮಾರ್ಗದರ್ಶನದಲ್ಲಿ ಔದ್ಯೋಗಿಕ ಮಾರ್ಗದರ್ಶನವು ಒಂದು ಮುಖ್ಯವಾದ ಆಯಾಮ. ಸಾಮಾನ್ಯವಾಗಿ ಪ್ರೌಢಶಾಲಾ ಹಂತದಲ್ಲೇ ಮಗುವಿಗೆ ತಾನು ಮುಂದೆ ಏನು ಆಗಬೇಕು? ಎಂಬ ಕುತೂಹಲ ಮೂಡುತ್ತದೆ. ಯಾವ ಕೋರ್ಸ್ ಸೇರಬೇಕು? ಅದಕ್ಕೆ ಬೇಕಾದ ಸಾಮರ್ಥ್ಯವೇನು? ಅದನ್ನು ಹೇಗೆ ಬೆಳೆಸಿಕೊಳ್ಳುವುದು? ತಾನು ಸೇರಬೇಕಾದ ಉದ್ಯೋಗದ ಸಾಧಕ-ಬಾಧಕಗಳೇನು? ಮುಂತಾದ ಪ್ರಶ್ನೆಗಳು ಕಾಡುತ್ತಿರುತ್ತವೆ. ಶೈಕ್ಷಣಿಕ ಮಾರ್ಗದರ್ಶನವು ಈ ಪ್ರಶ್ನೆಗಳಿಗೆ ಉತ್ತರ ಕೊಡುವಂತಾಗಿರಬೇಕು. ಔದ್ಯೋಗಿಕ ಕ್ಷೇತ್ರದ ವೈವಿಧ್ಯತೆಯನ್ನು ಗಮನದಲ್ಲಿಟ್ಟುಕೊಂಡು ಪಠ್ಯಕ್ರಮ ಮತ್ತು ಮಾರ್ಗದರ್ಶನದ ತಂತ್ರಗಳನ್ನು ಸಂರಚಿಸಬೇಕು. ಎಲ್ಲಾ ಉದ್ಯೋಗದ ಕುಂದುಕೊರತೆಗಳು ಮತ್ತು ಆ ಉದ್ಯೋಗಗಳು ಅಪೇಕ್ಷಿಸುವ ಸಾಮರ್ಥ್ಯಗಳು ಮತ್ತು ಅವುಗಳು ಅಪೇಕ್ಷಿಸುವ ತ್ಯಾಗಗಳ ಬಗ್ಗೆ ಮಾಹಿತಿಗಳನ್ನು ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಕೊಡುವ ತಂತ್ರಗಳು ರೂಪಿಸಲ್ಪಡಬೇಕು.

ಒಟ್ಟಿನಲ್ಲಿ ಮಾರ್ಗದರ್ಶನ ಪ್ರೀತಿ, ವಾತ್ಸಲ್ಯ, ಸಮಯಪ್ರಜ್ಞೆ ಮತ್ತು ಬೌದ್ಧಿಕ ಕುಶಲತೆಗಳನ್ನು ಬೆಳೆಸಬೇಕಾಗುತ್ತದೆ. ಮಾರ್ಗದರ್ಶನದ ಮೂಲಕ ಪಡೆದ ಜ್ಞಾನ, ಕೌಶಲ, ಅಭಿರುಚಿಗಳು ಸಮಾಜದ ಸರ್ವತೋಮುಖ ಬೆಳವಣಿಗೆಗೆ ಸಹಾಯಕವಾಗಬೇಕಾಗುತ್ತದೆ.





## ಕರ್ನಾಟಕದ ಉಪ ಮುಖ್ಯಮಂತ್ರಿಗಳು

| ಕ್ರಮ ಸಂಖ್ಯೆ | ಹೆಸರು | ಅಧಿಕಾರದ ಅವಧಿ |
|---|---|---|
| | ಶ್ರೀಯುತರುಗಳಾದ : | |
| 1. | ಎಸ್.ಎಂ. ಕೃಷ್ಣ | 20-01-1993 ರಿಂದ 10-12-1994 |
| 2. | ಜೆ.ಹೆಚ್. ಪಟೇಲ್ | 11-12-1994 ರಿಂದ 31-05-1996 |
| 3. | ಸಿದ್ಧರಾಮಯ್ಯ | 31-05-1996 ರಿಂದ 22-07-1999 |

## ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ವಿ. ವೆಂಕಟಪ್ಪ | 1949 ರಿಂದ 1952 |
| 2. | ಹೆಚ್. ಸಿದ್ಧಯ್ಯ | 18-06-1952 ರಿಂದ 14-05-1954 |
| 3. | ಹೆಚ್.ಎಸ್. ರುದ್ರಪ್ಪ | 13-10-1954 ರಿಂದ 01-11-1956 |
| 4. | ಎಸ್.ಆರ್. ಕಂಠಿ | 19-12-1956 ರಿಂದ 09-03-1962 |
| 5. | ಬಿ. ವೈಕುಂಠ ಬಾಳಿಗಾ | 15-03-1962 ರಿಂದ 15-03-1967 |
| | | 15-03-1967 ರಿಂದ 06-06-1968 |
| | | 05-09-1968 ರಿಂದ 24-03-1972 |
| 6. | ಎಸ್.ಡಿ. ಕೊಟಾವಳೆ | 24-03-1972 ರಿಂದ 17-03-1978 |
| 7. | ಶ್ರೀಮತಿ ಕೆ.ಎಸ್. ನಾಗರತ್ನಮ್ಮ | 17-03-1978 ರಿಂದ 03-10-1980 |
| 8. | ಪಿ. ವೆಂಕಟರಮಣ | 30-01-1981 ರಿಂದ 24-01-1983 |
| 9. | ಕೆ.ಹೆಚ್. ರಂಗನಾಥ್ | 24-01-1983 ರಿಂದ 17-03-1985 |
| 10. | ಡಿ.ಬಿ. ಚಂದ್ರೇಗೌಡ | 18-03-1985 ರಿಂದ 17-12-1989 |
| 11. | ಬಿ.ಜಿ. ಬಣಕಾರ್ | 18-12-1989 ರಿಂದ 20-01-1993 |
| 12. | ಎಸ್.ಎಂ. ಕೃಷ್ಣ | 15-02-1993 ರಿಂದ 26-12-1994 |
| 13. | ವಿ.ಎಸ್. ಕೌಜಲಗಿ | 27-12-1994 ರಿಂದ 24-10-1999 |
| 14. | ರಮೇಶ್ ಕುಮಾರ್ | 26-10-1999 ರಿಂದ |
| 15. | ಎಂ.ವಿ. ವೆಂಕಟಪ್ಪ . | |

# ಶ್ರೀ ಗುರುವಣ್ಣ ದೇವರ ಮಠದಲ್ಲಿ ನಿರಂಜನ ನಿರಾಭಾರಿ ಚರ ಪಟ್ಟಾಧಿಕಾರ ಮಹೋತ್ಸವ




*ಜೂನ್ ೧೭ರಂದು ಬೆಂಗಳೂರಿನ ಶ್ರೀ ಗುರುವಣ್ಣ ದೇವರ ಮಠದಲ್ಲಿ ನಡೆದ ನಿರಂಜನ ನಿರಾಭಾರಿ ಚರಪಟ್ಟಾಧಿಕಾರ ಮಹೋತ್ಸವದ ಅಂಗವಾಗಿ ನಡೆದ ಧಾರ್ಮಿಕ ಸಭೆಯ ದಿವ್ಯ ಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಆಶೀರ್ವಚನ ನೀಡುತ್ತಿರುವುದು. ವೇದಿಕೆಯಲ್ಲಿ : ಪೂಜ್ಯರಾದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು, ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು, ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳವರು, ಶ್ರೀ ಶ್ರೀ ಕಾಲಾಗ್ನಿರುದ್ರಮುನಿ ಸ್ವಾಮಿಗಳು, ಶ್ರೀ ಶ್ರೀ ರೇಣುಕಾ ಶಿವಾಚಾರ್ಯ ಮಹಾಸ್ವಾಮಿಗಳವರು, ಶ್ರೀ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳವರು ಹಾಗೂ ಸಾಹಿತಿ ಡಾ. ಸಾ.ಶಿ. ಮರುಳಯ್ಯನವರು ಉಪಸ್ಥಿತರಿದ್ದರು.*

ಸಮಾಜಕ್ಕೆ ಮಾರ್ಗದರ್ಶನ ಮಾಡುವವರು ಮಠಾಧೀಶ್ವರರು. ಅವರ ಜೀವನ ಆದರ್ಶಪ್ರಾಯವಾಗಿರ ಬೇಕಾದರೆ, ಮಠಾಧೀಶ್ವರರು ತಪ್ಪದೆ ಬ್ರಹ್ಮಚರ್ಯಪಾಲಿಸ ಬೇಕು. ನೆನ್ನೆಯವರೆಗೆ ನಡೆದುದ್ದನ್ನು ಬಿಟ್ಟುಬಿಡೋಣ ಇಂದಿನಿಂದ ಹೊಸಜೀವನ ಆರಂಭಿಸೋಣ ಬೆಳಗ್ಗೆ ಬ್ರಾಹ್ಮಿಮುಹೂರ್ತದಲ್ಲಿ ಎದ್ದು ಶಿವಪೂಜೆಯನ್ನು ಚೆನ್ನಾಗಿ ಮಾಡಲಿ'' ಎಂದು ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಮಠಾಧೀಶ್ವರರಿಗೆ ಕರೆ ನೀಡಿದರು. ಪೂಜ್ಯ ಶ್ರೀ ಶ್ರೀಗಳವರು ೧೭-೬-೨೦೦೨ರಂದು ಬೆಂಗಳೂರಿನಲ್ಲಿರುವ ಶ್ರೀ ಗುರುವಣ್ಣ ದೇವರ ಮಠದ ಶ್ರೀಮನ್ನಿರಂಜನ ನಿರಾಭಾರಿ ಚರಪಟ್ಟಾಧಿಕಾರದ ಸಾನ್ನಿಧ್ಯ ವಹಿಸಿ ಮಾತನಾಡುತ್ತಿದ್ದರು. ಮಠಾಧೀಶ್ವರರು ಧರ್ಮಗ್ರಂಥಗಳನ್ನು, ವಚನ





ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿ, ತಮ್ಮ ಅಧ್ಯಯನದಿಂದ ಪಡೆದ ಹೊಸ ಬೆಳಕನ್ನು ಸಮಾಜಕ್ಕೆ ನೀಡಬೇಕು. ಇಂದು ಧರ್ಮಶಿಥಿಲವಾಗುತ್ತಿದೆ. ಜನರು ಧರ್ಮದಿಂದ ದೂರವಾಗುತ್ತಿದ್ದಾರೆ. ಯುವಜನ ದಾರಿತಪ್ಪುತಿದ್ದಾರೆ. ಬೇರೆ ಬೇರೆ ಸಂಸ್ಕೃತಿಗಳು ಅವರನ್ನು ಆಕರ್ಷಿಸಿವೆ. ಅವರಿಗೆ ಉತ್ತಮ ಮಾರ್ಗದರ್ಶನ ಮಾಡುವುದು ಅವಶ್ಯಕವಾಗಿದೆ. ಉತ್ತಮ ಶಿಕ್ಷಣ, ಇಂದು ಶರಣರ ಆದರ್ಶಗಳನ್ನು ಪಾಲಿಸುವುದರ ಜೊತೆಗೆ ''ಕಾಯಕಮಾಡಿ'' ದಾಸೋಹಮಾಡುವ ಪ್ರವೃತ್ತಿಯಲ್ಲಿ ಆಸಕ್ತಿ ಮೂಡಿಸಬೇಕು, ತಮ್ಮ ಗಳಿಕೆಯಲ್ಲಿ ಸ್ವಲ್ಪ ಭಾಗವಾದರೂ ದಾನಧರ್ಮಕ್ಕೆ ಮೀಸಲಿಡಲು ಪ್ರೇರೇಪಿಸಬೇಕು. ಸಕಲಜೀವಾತ್ಮರಿಗೆ ಲೇಸೆನಿಸುವಂತೆ ಬಾಳಬೇಕು, ನಮ್ಮನಾಡಿನಲ್ಲಿ ಹಿಂದಿನಿಂದ ದಾನ-ಧರ್ಮ ಪರೋಪಕಾರ ಮಾಡಿದ ಮಹಾತ್ಮರ ಜೀವನಾದರ್ಶವನ್ನು ಕಾಣಬೇಕು'' ಎಂದು ನುಡಿದರು.

''ಭಾರತದಲ್ಲಿ ಮಹಿಳೆಯರ ಪಾತ್ರ ಆದರ್ಶವಾದುದು. ಇಂದಿನ ಮಹಿಳೆಯರು ಆದರ್ಶ ಗೃಹಿಣಿಯರಾಗಿ ಬಾಳುವುದು ಅವಶ್ಯಕ. ಗುರು-ಹಿರಿಯರಲ್ಲಿ ಭಕ್ತಿ, ಗಂಡ ಮಕ್ಕಳ ಬಗ್ಗೆ ಪ್ರೀತಿ, ಸೇವಾಮನೋಭಾವೆ, ಮನೆತನಗಳ ಬಗ್ಗೆ ಗೌರವವನ್ನು ಕಾಪಾಡುವ ಮನಸ್ಸುಳ್ಳವರಾಗಿರಬೇಕು, ''ನಾರಿಸ್ವರ್ಗಕ್ಕೆ ದಾರಿ'' ಎಂಬ ಉಕ್ತಿಯಿದೆ, ಹನ್ನೆರಡನೆಯ ಶತಮಾನದ ಶರಣೆಯರು ಪವಿತ್ರ ಕಾಯಕಮಾಡಿ, ಸಮಾಜಸೇವೆ, ಕಾಯಕದಾಸೋಹ ಮಾಡುತ್ತಾ ತಮ್ಮ ಗಂಡಮಕ್ಕಳಿಗೂ ಮಾರ್ಗದರ್ಶನ ಮಾಡಿದ್ದಾರೆ. ವಿದ್ಯಾವಂತರಾಗುವುದರ ಜೊತೆಗೆ ಆಚಾರವಂತರಾಗಬೇಕು, ಹೊರ ಸೌಂದರ್ಯಕ್ಕಿಂತ ಒಳಸೌಂದರ್ಯ ಹೆಚ್ಚಬೇಕಾಗಿದೆ'' ಎಂದು ತಿಳಿಸಿದರು.

ಇಂದು ನಮ್ಮ ದೇಶದಲ್ಲಿ ಅಲ್ಲಲ್ಲಿ ಕೊಲೆ, ಸುಲಿಗೆ, ಅತ್ಯಾಚಾರ, ದರೋಡೆ, ಭ್ರಷ್ಟಾಚಾರ, ಅಪ್ರಮಾಣಿಕತೆ ತಾಂಡವಾಡುತ್ತಿದೆ. ಅಧಿಕಾರಿಗಳು ಲಂಚ, ಭ್ರಷ್ಟಾಚಾರ, ವಂಚನೆ ಮಾಡುವುದು ಪತ್ರಿಕೆಗಳಲ್ಲಿ ಬರುತ್ತಿದೆ. ಇದಕ್ಕೆ ಅವರ ನೈತಿಕ ಜೀವದ ಅಧಃಪಥನವೇ ಕಾರಣ. ಇವರಿಗೆ ಮಠಾಧೀಶ್ವರರು ಮಾರ್ಗದರ್ಶನಮಾಡಬೇಕು. ವಿದ್ಯಾವಂತರು ಸಮಾಜ ಮತ್ತು ದೇಶಕ್ಕೆ ಪ್ರಾಮಾಣಿಕವಾಗಿ ಸೇವೆಸಲ್ಲಿಸಬೇಕಾಗಿದೆ, ಭಾರತ ವಿಶ್ವಕ್ಕೆ ಆದರ್ಶವಾಗಿತ್ತು. ಇಂದು ಆ ಕೀರ್ತಿಗೆ ಕಳಂಕ ಬರುತ್ತಿದೆ. ಪುನಃ ತಮ್ಮ ರಾಷ್ಟ್ರವನ್ನು ಮೇಲೆತ್ತಬೇಕು. ಶಾಂತಿ, ನೆಮ್ಮದಿಯಿಂದ, ಜನರು ಬಾಳುವಂತಹ ಕಾಲ ಬೇಗ ಬರಲಿ ಎಂದು ಭಗವಂತನನ್ನು ಪ್ರಾರ್ಥಿಸೋಣ'' ಎಂದು ನುಡಿದರು.

ಈ ಶುಭ ಸಂದರ್ಭದಲ್ಲಿ ಪೂಜ್ಯ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿದೇಶಿಕೇಂದ್ರ ಮಹಾಸ್ವಾಮಿಗಳು ತಮ್ಮ ಆಶೀರ್ವಚನದಲ್ಲಿ ''ನಮ್ಮ ನಾಡಿನ ದಾರ್ಶನಿಕರು, ಶಿವಶರಣರು ಶ್ರೇಷ್ಠಮಾರ್ಗದರ್ಶನಮಾಡಿರುತ್ತಾರೆ ಅವುಗಳನ್ನು ತಿಳಿದು ಆಚರಿಸಬೇಕು. ಗುರುವಣ್ಣ ದೇವರ ಮಠದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಮಠವನ್ನು ಅಭಿವೃದ್ಧಿಪಥದತ್ತ ಮುನ್ನಡೆಸುತ್ತಿದ್ದಾರೆ. ಇಂದಿನ ನೂತನ ಸ್ವಾಮಿಗಳು, ಈ ಮಠದ ಅನೇಕ ಶಿವಯೋಗಿಗಳು ವಿದ್ಯಾವಂತರಾಗಿ, ಕನ್ನಡ, ಸಂಸ್ಕೃತ, ತೆಲಗು, ತಮಿಳು ಭಾಷೆಯಲ್ಲಿ ವಿದ್ವಾಂಸರಾಗಿ ಹತ್ತಾರು ಗ್ರಂಥಗಳನ್ನು ಬರೆದು ಪ್ರಕಟಿಸಿದ್ದಾರೆ. ಅವರ ಆದರ್ಶಗಳನ್ನು ಪಾಲಿಸಿ ಶ್ರೀಮಠಕ್ಕೆ ಕೀರ್ತಿತರಲಿ'' ಎಂದು ಶುಭ ಕೋರಿದರು.

ಸಮಾರಂಭದಲ್ಲಿ, ಶ್ರೀ ಬೇಲಿಮಠ, ಶ್ರೀ ಗುರುವಣ್ಣ ದೇವರಮಠ, ರಾಜಾಪುರಮಠ, ಶ್ರೀ ದೇಗುಲಮಠ ಮತ್ತು ಮರಳೇಗವಿ ಮಠದ ಶ್ರೀಗಳು ಆಶೀರ್ವಚನ ನೀಡಿದರು. ಸಾಹಿತಿ ಡಾ. ಸಾ.ಶಿ. ಮರುಳಯ್ಯನವರು ಪ್ರಸ್ತುತ ಪರಿಸ್ಥಿತಿಯಲ್ಲಿ ಧರ್ಮದ ಅಗತ್ಯವನ್ನು ಒತ್ತಿ ಹೇಳಿದರು. ನೂತನ ಶ್ರೀ ಶ್ರೀ ನಂಜುಂಡಸ್ವಾಮಿಗಳಿಗೆ, ಭಕ್ತಾದಿಗಳು, ಕಾಣಿಕೆ ಸಮರ್ಪಿಸಿ ಗೌರವ ಸಮರ್ಪಿಸಿದರು. ''ಮಹಾ ದಾಸೋಹ''ದೊಡನೆ ಸಭೆ ಮುಕ್ತಾಯವಾಯಿತು. ಈ ಕಾರ್ಯಕ್ರಮದಲ್ಲಿ ಸುಮಾರು ಇನ್ನೂರು ಜನ ಮಠಾಧೀಶ್ವರರು, ಸಹಸ್ರಾರು ಜನ ಅಭಿಮಾನಿಗಳು, ಭಕ್ತರು ಭಾಗವಹಿಸಿದ್ದರು.

ವರದಿ : ವಿದ್ವಾನ್ ಜಿ.ವಿ. ಶಿವಸ್ವಾಮಿ



ಕೇಂದ್ರ ಸಚಿವರಾದ ಶ್ರೀ ಅನಂತಕುಮಾರ್ ಅವರು ಇತ್ತೀಚೆಗೆ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀಗಳವರ ದರ್ಶನಭಾಗ್ಯ ಪಡೆದರು. ಅವರು ಈ ಸಂದರ್ಭದಲ್ಲಿ ದಾಸೋಹ ಮಂದಿರಕ್ಕೂ ಭೇಟಿ ನೀಡಿ ಮಕ್ಕಳಿಗೆ ಪ್ರಸಾದವನ್ನು ವಿತರಣೆ ಮಾಡಿದರು.



ಇತ್ತೀಚೆಗೆ ಪದವೀಧರ ಕ್ಷೇತ್ರದಿಂದ ವಿಧಾನ ಪರಿಷತ್‌ಗೆ ಆಯ್ಕೆಯಾದ ಶ್ರೀ ಎಚ್.ಎಸ್. ಶಿವಶಂಕರ್ ಅವರು ಶ್ರೀಮಠಕ್ಕೆ ಭೇಟಿ ನೀಡಿ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರ ದರ್ಶನಾಶೀರ್ವಾದ ಪಡೆದರು.





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೬೧೨. | ಶ್ರೀ ಬಿ. ಮರುಳಸಿದ್ದಪ್ಪ, ಪ್ರ. ಶಿಕ್ಷಕರು,<br>ಶ್ರೀ ಬಸವೇಶ್ವರ ಶಿಕ್ಷಕ ತರಬೇತಿ ಸಂಸ್ಥೆ,<br>ಶ್ರೀ ಸಿದ್ಧಗಂಗಾ ಮಠ, ತುಮಕೂರು. | ೧,೦೦೦.೦೦<br>(೧ನೇ ಕಂತು) |
| ೬೧೩. | ಶ್ರೀ ಜಿ. ಕರಿಸಿದ್ಧಯ್ಯ<br>ನಿವೃತ್ತ ತಹಶೀಲ್ದಾರ್,<br>ರೈಲ್ವೇ ಸ್ಟೇಷನ್ ರಸ್ತೆ, ತಿಪಟೂರು<br>ದಿ. ಶ್ರೀಮತಿ ಜಿ. ಸರ್ವಮಂಗಳಮ್ಮ<br>ಇವರ ಸ್ಮರಣಾರ್ಥ | ೨,೦೦೧.೦೦ |
| ೬೧೪. | ಶ್ರೀ ಬಿ.ವಿ. ಮಹದೇವಯ್ಯ<br>ನಂ. ೮೬೧, ೨ನೇ ಮಹಡಿ, ೪ನೇ ಮುಖ್ಯರಸ್ತೆ,<br>೩ನೇ ಕ್ರಾಸ್, ವಿಜಯನಗರ<br>ಬೆಂಗಳೂರು – ೫೬೦ ೦೪೦ | ೧,೦೦೫.೦೦<br>(೨ನೇ ಕಂತು) |
| ೬೧೫. | ಶ್ರೀ ರುದ್ರಯ್ಯ ಬಿನ್ ಗುಬ್ಬಣ್ಣ<br>ಮತ್ತು ಕುಟುಂಬವರ್ಗದವರು<br>ಮಲ್ಲೇಶಪುರ ಅಟ್ ಅಂಡ್ ಪೋಸ್ಟ್,<br>ಕೊರಟಗೆರೆ ತಾ. ತುಮಕೂರು ಜಿಲ್ಲೆ. | ೯೦೦.೦೦<br>(೧ನೇ ಕಂತು) |
| ೬೧೬. | ಶ್ರೀ ಟಿ. ಗುರುದೇವಪ್ಪ, ನಿವೃತ್ತ ಶಿಕ್ಷಕರು,<br>ಶ್ರೀ ರೇಣುಕಾಚಾರ್ಯ ಮಂದಿರ,<br>ಬಸವನಗುಡಿ ಬೀದಿ, ಹೊಳೇನರಸೀಪುರ<br>ಹಾಸನ ಜಿಲ್ಲೆ. | ೫,೦೦೦.೦೦ |
| ೬೧೭. | ಶ್ರೀ ವಿ.ಎನ್. ಶ್ರೀಕಂಠ<br>ನಂ. ೭, ೨ನೇ ಕ್ರಾಸ್, ೩೭ನೇ ಅಡ್ಡರಸ್ತೆ,<br>೭ನೇ ಹಂತ, ಬಿ.ಟಿ.ಎಂ. ಲೇ ಔಟ್,<br>ಬೆಂಗಳೂರು – ೫೬೦ ೦೬೮. | ೫,೦೦೧.೦೦ |
| ೬೧೮. | ಶ್ರೀ ಹೆಚ್.ವಿ. ವೀರಭದ್ರಯ್ಯ<br>ನಿವೃತ್ತ ಪ್ರಾಧ್ಯಾಪಕರು,<br>ನಂ. ೧೭೬, 'ಹರತೇಶ ಕೃಪ',<br>ಎಸ್.ಐ.ಟಿ. ೩ನೇ ಕ್ರಾಸ್,<br>ತುಮಕೂರು – ೫೭೨ ೧೦೨.<br>ಲಿಂ. ಮುದ್ದವೀರಮ್ಮ ಮತ್ತು ಶ್ರೀ ಎಸ್. ವೀರಯ್ಯ<br>ಹರ್ತಿಕೋಟೆ, ಹಿರಿಯೂರು ತಾಲ್ಲೂಕು,<br>ಚಿತ್ರದುರ್ಗ ಜಿಲ್ಲೆ. ಇವರ ಸ್ಮರಣಾರ್ಥ | ೨,೧೦೨.೦೦ |
| ೬೧೯. | ಶ್ರೀ ಸಿ. ಚಂದ್ರಶೇಖರ್<br>ನಂ. ೮೦೦/೧೧, ೭ನೇ ಕ್ರಾಸ್,<br>ವೀವರ್ಸ್ ಕಾಲೋನಿ, ಗೊಟ್ಟಿಗೆರೆ ಅಂಚೆ<br>ಬನ್ನೇರುಘಟ್ಟ ರಸ್ತೆ,<br>ಬೆಂಗಳೂರು – ೫೬೦ ೦೮೩. | ೧,೦೦೧.೦೦<br>(೧ನೇ ಕಂತು) |
| ೬೨೦. | ಶ್ರೀಮತಿ ಜಯಮ್ಮ ಮತ್ತು ಶ್ರೀ ವಿಶ್ವನಾಥ<br>ನಂ. ೫೭೬, 'ವಿಜಯಶ್ರೀ', ೨ನೇ ಕ್ರಾಸ್<br>೪ನೇ ಮುಖ್ಯರಸ್ತೆ, ಎನ್‌ಜಿಇಎಫ್ ಬಡಾವಣೆ,<br>ನಾಗರಭಾವಿ, ಬೆಂಗಳೂರು – ೭೨. | ೨,೦೦೩.೦೦ |
| ೬೨೧. | ಶ್ರೀ ಹೆಚ್.ಪಿ. ನಂದ ಅರುಣ್<br>ಕೇರಾಫ್ ಹೆಚ್.ಕೆ. ಪರಮೇಶ್ ಹಾಗೂ ವಿಮ್‌ಗಲ್<br>ಹಿಪ್ಲಿ ಎಸ್ಟೇಟ್, ಹಂಡ್ಲಿ ಅಂಚೆ,<br>ಶನಿವಾರಸಂತೆ ಮಾರ್ಗ,<br>ಉತ್ತರ ಕೊಡಗು. | ೧,೦೦೦.೦೦<br>(೧ನೇ ಕಂತು) |
| ೬೨೨. | ಎಸ್.ಐ.ಟಿ. ಗ್ರೂಪ್ ಆಫ್ ಹಾಸ್ಟೆಲ್<br>ಎಂಪ್ಲಾಯ್ಸ್ ಟ್ರೇಡ್ ಯೂನಿಯನ್ (೪)<br>ಗೋಕುಲ ಬಡಾವಣೆ, ತುಮಕೂರು. | ೫,೦೦೦.೦೦ |
| ೬೨೩. | ಶ್ರೀ ಎ.ಜಿ. ಶಿಬನಿ ಬಿನ್<br>ಎ.ಎಸ್. ಜಯದೇವಯ್ಯ<br>'ಕಮಲ' ೧ನೇ ಕ್ರಾಸ್, ಸಿ.ಬಿ. ಲೇ ಔಟ್<br>ಉಪ್ಪಾರಹಳ್ಳಿ, ಎಸ್.ಎಸ್. ಪುರಂ ಅಂಚೆ<br>ತುಮಕೂರು – ೨. | ೧,೦೦೧.೦೦<br>(೧ನೇ ಕಂತು) |
| ೬೨೪. | ಶ್ರೀ ಎ.ಜಿ. ಮದುಕೇಶ್ ಬಿನ್<br>ಎ.ಎಸ್. ಜಯದೇವಯ್ಯ<br>'ಕಮಲ' ೧ನೇ ಕ್ರಾಸ್, ಸಿ.ಬಿ. ಲೇ ಔಟ್<br>ಉಪ್ಪಾರಹಳ್ಳಿ, ಎಸ್.ಎಸ್. ಪುರಂ ಅಂಚೆ,<br>ತುಮಕೂರು – ೫೭೨ ೧೦೨. | ೧,೦೦೧.೦೦<br>(೧ನೇ ಕಂತು) |
| ೬೨೯. | ಪ್ರಾಂಶುಪಾಲರು<br>ಶ್ರೀ ವಿನಾಯಕ ಪದವಿ ಪೂರ್ವ ಕಾಲೇಜು<br>ನಿಟ್ಟೂರು, ಗುಬ್ಬಿ ತಾಲ್ಲೂಕು<br>ತುಮಕೂರು ಜಿಲ್ಲೆ. | ೧೦,೦೦೦.೦೦ |
| ೬೩೦. | ಶ್ರೀ ಶಿವಾನಂದಪ್ಪ ಅವಾಜಿ<br>ತಲಗಿನಕೆರೆ, ಶಿರಾಲಕೊಪ್ಪ,<br>ಶಿರಾಲಕೊಪ್ಪ ತಾಲ್ಲೂಕು<br>ಶಿವಮೊಗ್ಗ ಜಿಲ್ಲೆ. | ೨,೦೦೧.೦೦ |
| ೬೩೧. | ಶ್ರೀ ಕೆ.ಸಿ. ಶಿವಗಂಗಯ್ಯನವರು<br>ನಿವೃತ್ತ ಅಧೀಕ್ಷಕರು,<br>ಶ್ರೀಮಠದ ನೌಕರರ ವಸತಿಗೃಹ,<br>ಶ್ರೀ ಸಿದ್ಧಗಂಗಾ ಮಠ, ತುಮಕೂರು. | ೧,೦೦೦.೦೦<br>(ಅಂತಿಮ ಕಂತು) |
| ೬೩೨. | ಲಿಂ. ಬೋಗಪ್ಪ ಶೆಟ್ಟರ ಮಕ್ಕಳು<br>ಲಿಂ. ಶಿವಮಲ್ಲಪ್ಪ ಮತ್ತು ಲಿಂ. ಟಿ.ಬಿ. ನಾಗಪ್ಪ<br>ಇವರುಗಳ ಸ್ಮರಣಾರ್ಥ<br>ಶ್ರೀಮತಿ ಸಿದ್ಧಗಂಗಮ್ಮನವರು,<br>ಶ್ರೀ ಬಸವೇಶ್ವರ ಬೀದಿ,<br>ತರೀಕೆರೆ, ಚಿಕ್ಕಮಗಳೂರು ಜಿಲ್ಲೆ. | ೪,೦೦೦.೦೦ |

(ಮುಂದುವರಿಯುತ್ತದೆ)

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೩೬೨. | ಶ್ರೀ ಪಿ.ಎನ್. ಲಿಂಗಪ್ಪ<br>ನಂ. ೨೮/೧೯, ೧೯ನೇ ಮುಖ್ಯರಸ್ತೆ,<br>ಎಂ.ಸಿ. ಲೇ ಔಟ್, ವಿಜಯನಗರ,<br>ಬೆಂಗಳೂರು – ೫೬೦ ೦೪೦. | ೧೦೦೧.೦೦ |
| ೩೬೩. | ಶ್ರೀ ಎಸ್. ಸಿದ್ದಯ್ಯ ಬಿನ್ ಸಿದ್ದನಂಜಪ್ಪ<br>ಕೊಟ್ಟಿಗೆಹಳ್ಳಿ, ನೆಲ್ಲಿಗೆರೆ ಅಂಚೆ,<br>ತಿಪಟೂರು ತಾಲ್ಲೂಕು,<br>ತುಮಕೂರು ಜಿಲ್ಲೆ. | ೧೧೦೧.೦೦ |
| ೩೬೪. | ಡಾ. ಬಸವರಾಜ್ ಮತ್ತು ಡಾ. ಮಂಜುಳ<br>ದಲಾಸ್ ಟೆಕ್ಸಾಸ್,<br>ಯುನೈಟೆಡ್ ಸ್ಟೇಟ್ಸ್ ಆಫ್ ಅಮೇರಿಕಾ. | ೨೧೦೧.೦೦ |
| ೩೬೫. | ಶ್ರೀಮತಿ ಜಿ.ಎಸ್. ನಾಗರತ್ನಮ್ಮ<br>ಹಿಂದಿ ಶಿಕ್ಷಕಿ,<br>ಶ್ರೀ ಬಸವೇಶ್ವರ ಆಂಗ್ಲಮಾಧ್ಯಮ<br>ಹಿರಿಯ ಪ್ರಾಥಮಿಕ ಶಾಲೆ,<br>ಬಿ.ಹೆಚ್. ರಸ್ತೆ, ತುಮಕೂರು – ೨. | ೧೦೦೮.೦೦ |
| ೩೬೬. | ಶ್ರೀ ಎನ್.ಜಿ. ಮಹೇಶ್ವರಪ್ಪ<br>ನಿಧಿಗೆ ಅಂಚೆ – ೫೭೭೨೨೨<br>ಶಿವಮೊಗ್ಗ ಜಿಲ್ಲೆ. | ೧೦೦೫.೦೦ |
| ೩೬೭. | ಶ್ರೀಮತಿ ಅಮೃತಮ್ಮ<br>ನಂ. ೮೭೬, ೮ನೇ ಕ್ರಾಸ್, ೮ನೇ ಮುಖ್ಯರಸ್ತೆ,<br>ಸರಸ್ವತಿಪುರಂ, ಮೈಸೂರು. | ೧೦೦೧.೦೦ |
| ೩೬೮. | ಶ್ರೀಮತಿ ಬಸಮ್ಮಣ್ಣಿ ಮತ್ತು ಮಕ್ಕಳು<br>ಶ್ರೀ ಗುರುಮಲ್ಲೇಶ್ವರ ಸಾಮಿಲ್,<br>ಹದಿನಾರು ಛತ್ರ, ಹೋಬಳಿ,<br>ನಂಜಗೂಡು ತಾಲ್ಲೂಕು | ೧೦೦೧.೦೦ |
| ೩೬೯. | ಶ್ರೀ ದೊಡ್ಡಹೊನ್ನಯ್ಯ<br>ನಿವೃತ್ತ ಕನ್ನಡ ಪಂಡಿತರು,<br>ಕೃಷ್ಣರಾಜಸಾಗರ, ಅಗ್ರಹಾರ<br>ಕುಣಿಗಲ್ ಟೌನ್, ತುಮಕೂರು ಜಿಲ್ಲೆ. | ೧೦೦೧.೦೦ |
| ೩೭೦. | ಶ್ರೀ ಜಗದೀಶ್ ಬಿನ್. ಬಿ. ಶ್ರೀನಿವಾಸ<br>ನಂ. ೩೫, ಜಿ. ೯ನೇ ಸ್ಟ್ರೀಟ್,<br>ಅಲಸೂರು, ಬೆಂಗಳೂರು – ೮. | ೧೧೫೧.೦೦ |
| ೩೭೧. | ಶ್ರೀ ಎಂ. ರೇಣುಕಾರಾಧ್ಯ<br>ಶ್ರೀ ರಂಗನಾಥ ಪ್ರೌಢಶಾಲೆ, ಕಲಕುಂಟೆ,<br>ಕಾಡುಗೋಡಿ ವಯಾ, ಬೆಂಗಳೂರು. | ೧೦೦೧.೦೦ |
| ೩೭೨. | ಶ್ರೀ ಮಹೇಶ್ ಆರ್. ಉಪ್ಪಿನ್<br>ವಕೀಲರು, ನಂ. ೧೯, ಹೇಮಂತ ನಿಲಯ<br>ರಾಮಕೃಷ್ಣಲೇಔಟ್, ಶೇಷಾದ್ರಿಪುರಂ<br>ಬೆಂಗಳೂರು. | ೧೧೦೭.೦೦ |
| ೩೭೩. | ಶ್ರೀ ಎನ್. ಷಣ್ಮುಖಪ್ಪ,<br>ನಿವೃತ್ತ ಪ್ರಾಧ್ಯಾಪಕರು, ಗಣಿತ ವಿಭಾಗ,<br>ನಂ. ೨೭೪೩, ೨ನೇ ಮುಖ್ಯರಸ್ತೆ,<br>೫ನೇ ಕ್ರಾಸ್, ಎಂ.ಸಿ.ಸಿ. 'ಬಿ' ಬ್ಲಾಕ್,<br>ದಾವಣಗೆರೆ. | ೧೦೦೧.೦೦ |
| ೩೭೪. | ಶ್ರೀ ಯಜಮಾನ್ ಚಿಕ್ಕವೀರಯ್ಯನವರು<br>ರಘುವನಹಳ್ಳಿ, ತಲಗಟ್ಟಪುರ ಅಂಚೆ,<br>ಬೆಂಗಳೂರು – ೫೬೦ ೦೬೨. | ೧೧೦೪.೦೦<br>(೨ನೇ ಕಂತು) |
| ೩೭೫. | ಶ್ರೀ ಆರ್. ಮುದ್ದರಂಗಯ್ಯ<br>ನಂ. ೯೭೮, 'ಎ' ೪ನೇ 'ಇ' ಬ್ಲಾಕ್,<br>೧೦ನೇ 'ಬಿ' ಮುಖ್ಯರಸ್ತೆ, ರಾಜಾಜಿನಗರ,<br>ಬೆಂಗಳೂರು – ೫೬೦ ೦೧೦. | ೧೦೦೦.೦೦ |
| ೩೭೬. | ಶ್ರೀ ಆರ್. ಶಿವಶಂಕರಯ್ಯ, ಮುಖ್ಯ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಮನ್ವಯ ಕೇಂದ್ರ,<br>ಶ್ರೀ ಸಿದ್ಧಗಂಗಾ ಮಠ. | ೧೦೦೧.೦೦ |
| ೩೭೭. | ಶ್ರೀ ಎಂ.ವಿ. ಗಂಗಾಧರಯ್ಯ, ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಮನ್ವಯ ಕೇಂದ್ರ,<br>ಶ್ರೀ ಸಿದ್ಧಗಂಗಾ ಮಠ – ೫೭೨ ೧೦೪. | ೧೦೦೧.೦೦ |
| ೩೭೮. | ಶ್ರೀ ಮಲ್ಲಪ್ಪ ಹಾನಗಲ್, ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಮನ್ವಯ ಕೇಂದ್ರ,<br>ಶ್ರೀ ಸಿದ್ಧಗಂಗಾ ಮಠ – ೫೭೨ ೧೦೪. | ೧೦೦೧.೦೦ |
| ೩೭೯. | ಶ್ರೀ ಬಿ.ಜಿ. ಲೋಕೇಶ್<br>ಬಿನ್ ಕೆ.ಜಿ. ಗೋವಿಂದಯ್ಯ<br>ನಂ. ೧೧೨೬, ೧೦ನೇ ಕ್ರಾಸ್,<br>ಆದರ್ಶ ಲೇ ಔಟ್, ಡಬ್ಲ್ಯೂಸಿಆರ್,<br>ವೆಸ್ಟ್ ಆಫ್ ಕಾರ್ಡ್ ರಸ್ತೆ, ಬಸವೇಶ್ವರ ನಗರ,<br>ಬೆಂಗಳೂರು – ೫೬೦ ೦೭೯. | ೧೦೦೧.೦೦ |
| ೩೮೦. | ಶ್ರೀಮತಿ ಪುಷ್ಪಲತ ಗಾಂಧಿ,<br>ಎಸ್.ವಿ.ಎಸ್. ಕಾರ್ಪೋರೇಷನ್,<br>ನಂ. ೫೪೫, ೧೧ನೇ 'ಎ' ಕ್ರಾಸ್,<br>ಸೆಕ್ಟಾರ್ 'ಎ' ಯಲಹಂಕ,<br>ಬೆಂಗಳೂರು – ೫೬೦ ೦೬೪. | ೨೦೦೧.೦೦ |

(ಮುಂದುವರಿಯುತ್ತದೆ)

